# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ

## ನಿತ್ಯಪೂಜೆ, ದರ್ಶನಾದಿಗಳ ಕಾರ್ಯಕ್ರಮ,

### ಶನಿ, ಭಾನು, ಸೋಮ ಮತ್ತು ಮಂಗಳವಾರಗಳಲ್ಲಿ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)

,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ

,, 3–45 ರಿಂದ 4–30 ವರೆಗೆ ತೋಮಾಲಸೇವೆ(ಏಕಾಂತ)

,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ

,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ

,, 5–30 ರಿಂದ 6–00 ವರೆಗೆ ಮೊದಲನೆಯ ಗಂಟೆ ಬಲಿ ಮತ್ತು ಶಾತ್ತುಮೊರೆ

,, 6–00 ರಿಂದ 12–00 ವರೆಗೆ ಸರ್ವದರ್ಶನ

ಮಧ್ಯಾಹ್ನ 12–00 ರಿಂದ 1–00 ವರೆಗೆ ಶುದ್ಧಿ ಎರಡನೇ ಅರ್ಚನೆ, (ಏಕಾಂತ)

,, 1–00 ರಿಂದ 7–00 ವರೆಗೆ ಸರ್ವದರ್ಶನ

,, 7–00 ರಿಂದ 8–00 ವರೆಗೆ ಶುದಿ , ರಾತ್ರಿ ಕೈಂಕರ್ಯ

ರಾತ್ರಿ 8–00 ರಿಂದ 12–00 ವರೆಗೆ ಸರ್ವದರ್ಶನ

,, 12–00 ರಿಂದ 12–30 ವರೆಗೆ ಶುದ್ಧಿ

12–30 ಏಕಾಂತಸೇವೆ

### ಬುಧವಾರ, ಸಹಸ್ರ ಕಲಶಾಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)

,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ

,, 3–45 ರಿಂದ 4–30 ವರೆಗೆ ತೋಮಾಲಸೇವೆ (ಏಕಾಂತ)

,, 4–30 ರಿಂದ 4–45 ವರೆಗೆ ಕೊಲುವು, ಪಂಚಾಂಗಶ್ರವಣ

,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ

,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ, ಶಾತ್ತುಮೊರೆ

,, 6–00 ರಿಂದ 8–00 ವರೆಗೆ ಸಹಸ್ರ ಕಲಶಾಭಿಷೇಕ (ಆರ್ಜಿತ) ಶುದ್ಧಿ 2ನೇ ಅರ್ಚನೆ

,, 8–00 ರಾತ್ರಿ 7–00 ವರೆಗೆ ಸರ್ವದರ್ಶನ

ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ

,, 8–00 ರಿಂದ 12–00 ವರೆಗೆ ಸರ್ವದರ್ಶನ

,, 12–00 ರಿಂದ 12–30 ವರೆಗೆ ಶುದ್ಧಿ

12–30 ರಿಂದ ಏಕಾಂತಸೇವೆ (ಆರ್ಜಿತ)

### ಗುರುವಾರ, ತಿರುಪ್ಪಾವಡ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)

,, 3–30 ರಿಂದ 3–45 ವರೆಗೆ ಶುದಿ ಇತ್ಯಾದಿ

,, 3–45 ರಿಂದ 4–30 ವರೆಗೆ ತೋಮಾಲಸೇವೆ

,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ

,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ

,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ ಶಾತ್ತುಮೊರೆ

,, 6–00 ರಿಂದ 8–00 ವರೆಗೆ ಸಳ್ಳಿಂಪು, 2 ನೇ ಅರ್ಚನೆ (ಏಕಾಂತ), ತಿರುಪ್ಪಾವಡ ಅಲಂಕರಣ, ಗಂಟೆ ಇತ್ಯಾದಿ

,, 8–00 ರಿಂದ ಸಂಜೆ 6–00 ವರೆಗೆ ಸರ್ವದರ್ಶನ

ಸಂಜೆ 6–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ

ರಾತ್ರಿ 8–00 ರಿಂದ 12–00 ವರೆಗೆ ಪೂಲಂಗಿ ಸರ್ವದರ್ಶನ

,, 12–00 ರಿಂದ 12–30 ವರೆಗೆ ಶುದ್ಧಿ

12–30 ರಿಂದ ಏಕಾಂತಸೇವೆ

### ಶುಕ್ರವಾರ, ಅಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)

,, 3–30 ರಿಂದ 5–00 ವರೆಗೆ ಸಳ್ಳಿಂಪು ಮತ್ತು ನಿತ್ಯ ಕೈಂಕರ್ಯಗಳು

,, 5–00 ರಿಂದ 7–00 ವರೆಗೆ ಅಭಿಷೇಕ (ಆರ್ಜಿತ)

,, 7–00 ರಿಂದ 8–30 ವರೆಗೆ ಸಮರ್ಪಣೆ

,, 8–30 ರಿಂದ 9–30 ವರೆಗೆ ತೋಮಾಲಸೇವೆ ಮತ್ತು ಅರ್ಚನೆ

,, 9–30 ರಿಂದ 10–00 ವರೆಗೆ ಬಲಿ, ಶಾತ್ತುಮೊರೆ

,, 10–00 ರಿಂದ ರಾತ್ರಿ 7–00 ವರೆಗೆ ಸರ್ವದರ್ಶನ

ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ

,, 8–00 ರಿಂದ 12–00 ವರೆಗೆ ಸರ್ವದರ್ಶನ

,, 12–00 ರಿಂದ 12–30 ವರೆಗೆ ಶುದ್ಧಿ

12–30 ಏಕಾಂತಸೇವೆ

---

ಗಮನಿಕೆ :– 1. ಮೇಲಿನ ಕಾರ್ಯಕ್ರಮಗಳು ಸಮಯಾನುಕೂಲವಾಗಿಯೂ ಪ್ರತ್ಯೇಕ ಕಾರ್ಯಕ್ರಮಗಳಿಂದಲೂ ಬದಲಾಯಿಸಲ್ಪಡಬಹುದು.

2. ತೋಮಾಲಸೇವೆಯಲ್ಲಿ ಒಬ್ಬರಿಗೆ 50/– ರೂ ಟಿಕೆಟ್, ಅರ್ಚನೆಯಲ್ಲಿ ಒಬ್ಬರಿಗೆ 100/– ರೂ ಟಿಕೆಟ್ ಏಕಾಂತಸೇವೆಯಲ್ಲಿ ಒಬ್ಬರಿಗೆ 50/– ರೂ ಟಿಕೆಟ್, ಪಡೆದಲ್ಲಿ ಪ್ರವೇಶಾವಕಾಶವುಂಟು.

3. ಸರ್ಕಾರ್ ಕಲ್ಯಾಣೋತ್ಸವ, ಆರ್ಜಿತ ಬ್ರಹ್ಮೋತ್ಸವ, ಊಂಜಲ್‌ಸೇವೆ, ವಾಹನ ಸೇವೆಗಳು, ಡೋಲೋತ್ಸವ, ಪ್ಲವೋತ್ಸವ ಮಂಗಳವಾರದಲ್ಲಿ ಮಧ್ಯಾಹ್ನ 1–00 ರಿಂದ 7–00 ನಡುವೆ ಜರುಗುವುವು.



ನೀಲ ವರ್ಣ ವಿಠಲ ನಾ ನಿನ್ನ ಮೆಚ್ಚಿದೆ । ಎನ್ನ
ಪಾಲಿಸಯ್ಯ ಪರಮ ಪಾವನ ಮೆಚ್ಚಿದೆ ॥ ಪ ॥

ಅರವಿಂದಶರದಿ ಲೋಚನಕ್ಕೆ ಭಯ । ಐಕ್ಯ
ವರ ನೀಲೋತ್ಪಲದಿ ವಕ್ಷದೊಳು ನಾಮ
ಸ್ಮರನ ಧಾಳಿಗೆ ಕಡುನೊಂದೆನೋ ಪ್ರಿಯ ನಿನ್ನ
ಕರುಣ ಕವಚವನ್ನು ತೊಡಿಸೋ ಜೀಯ ॥ ೧ ॥

ಉರದ ಮೇಲಿಡು ಪಾದ ಬಾಲರವಿಯ
ತರಳ ಲೋಚನಕೆ ಮುಖೇಂದು ಛವಿಯ
ಗುರಿಮಾಡಿ ರಕ್ಷಿಸೆನ್ನ ಸಿರಿದೇವಿಯ ಸ್ವಾಮಿ ॥ ೨ ॥
ವರವ ಬೇಡುವೆ ನಿನ್ನಂಘ್ರಿ ಸೇವೆಯ

ಮುನಿಗಳ ಮನಕೆ ಸಿಲುಕದಿಪ್ಪನ್ನೆ ಎನ್ನ
ಮನೆಗೆ ಬಾರೆಂಬುದುಚಿತವಲ್ಲ ನಿನ್ನ
ಅನಿಮಿತ್ತ ಬಂಧು ಎಂಬ ಗುಣಸಂಪನ್ನ
ಮನಕೆ ಬಾರಪ್ಪ ನೀ ಹಯವದನ ॥ ೩ ॥

— ಶ್ರೀ ವಾದಿರಾಜರು.



ಸಂಪುಟ 12] ಸಪ್ತಗಿರಿ ಮಾರ್ಚ್ 1982 [ಸಂಚಿಕೆ 10

# ವಿಷಯಸೂಚಿ




ಗೌರವ ಸಂಪಾದಕರು:
ಶ್ರೀ ಪಿ. ವಿ. ಆರ್. ಕೆ. ಪ್ರಸಾದ್, ಐ.ಎ.ಎಸ್.,

ಸಂಪಾದಕ:
ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ:
ಬಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ:
ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ ಪ್ರೆಸ್ ಕಾಂಪೌಂಡ್
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**

# ವಾರ್ತಾಲಹರಿ

## ಧಾರ್ಮಿಕ ನಾಟಕ ತರಬೇತಿ ಶಿಬಿರ

ಆಂಧ್ರ ಪ್ರದೇಶದ ನಾಟಕ ಅಕ್ಯಾಡಮಿ ವತಿಯಿಂದಾದ ಧಾರ್ಮಿಕ ನಾಟಕ ಶಿಬಿರವನ್ನು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಪಿ. ವಿ. ಆರ್. ಕೆ. ಪ್ರಸಾದರು ಖ್ಯಾತಚಿತ್ರತಾರೆ ಶ್ರೀಮತಿ ಜಮುನ ಅವರ ಅಧ್ಯಕ್ಷತೆಯಲ್ಲಿ ಉದ್ಘಾಟಿಸಿದರು.

ತಮ್ಮ ಉದ್ಘಾಟನಾ ಭಾಷಣದಲ್ಲಿ ಶ್ರೀಪ್ರಸಾದರು ಧಾರ್ಮಿಕ ನಾಟಕಗಳು ಬೀರಬಲ್ಲ ಪ್ರಭಾವವನ್ನು ಕುರಿತು ಮಾತನಾಡುತ್ತ ಗ್ರಾಮಾಂತರ ಪ್ರದೇಶಗಳಲ್ಲಿನ ಸಮೂಹ ಶಿಕ್ಷಣದಲ್ಲಿ ಧಾರ್ಮಿಕ ನಾಟಕ ಯಶಸ್ವಿ ಮಾಧ್ಯಮವಾಗುವ ಸಾಧ್ಯತೆಗಳನ್ನು ತಿಳಿಸಿ, ಇಲ್ಲಿ ತರಬೇತಿ ಹೊಂದಿದ ವಿದ್ಯಾರ್ಥಿಗಳು ಸಂಘಟಿತರಾಗಿ ಜನತೆಯಲ್ಲಿ ಧಾರ್ಮಿಕ ಭಾವನೆಗಳನ್ನು ಜಾಗೃತಿಗೊಳಿಸಿ ಆಧ್ಯಾತ್ಮಿಕ ಸಾಂಸ್ಕೃತಿಕ ಪರಂಪರೆಯನ್ನು ಬಲಗೊಳಿಸಿ ಮುಂದುವರಿಸಬೇಕೆಂದು ಕರೆ ನೀಡಿದರು.

ಮೂವತ್ತು ಮಂದಿ ಆಯ್ಕೆ ಹೊಂದಿದ ಶಿಕ್ಷಣಾರ್ಥಿಗಳಿಂದ ಕೂಡಿದ ಈ ಶಿಬಿರಕ್ಕೆ ಖ್ಯಾತ ರಂಗಭೂಮಿ ಕಲಾವಿದ ಮಲ್ಲಾದಿ ಸೂರ್ಯನಾರಾಯಣ ಅವರು ನಿರ್ದೇಶಕರಾಗಿದ್ದು, ಹಲವಾರು ಹಿರಿಯರು ಭಾಗವಹಿಸಿ, ತರಬೇತಿ ನೀಡಲಿದ್ದಾರೆ.

ಆಂಧ್ರಪ್ರದೇಶದ ನಾಟಕ ಅಕ್ಯಾಡಮಿಯ ಕಾರ್ಯದರ್ಶಿ ಕೃಷ್ಣಂರಾಜು ಅವರು ಸಭೆಯನ್ನು ಸ್ವಾಗತಿಸುತ್ತ ಈ ಶಿಬಿರ ತಿ. ತಿ. ದೇ. ಬೆಂಬಲದಿಂದ ನಡೆಯುತ್ತಿದೆಯೆಂದು ತಿಳಿಸಿದರು. ಶ್ರೀ ವೆಂಕಟೇಶ್ವರ ಕಲಾಪೀಠದ ಪ್ರಯಾಗ ನರಸಿಂಹ ಶಾಸ್ತ್ರಿ ಅವರು ತೆಲುಗಿನಲ್ಲಿ ಆಗಿ ಹೋದ ಧಾರ್ಮಿಕ ನಾಟಕಗಳ ಸಂಗೀತದ ಹಿರಿಮೆಯನ್ನು ಸ್ವಾರಸ್ಯವಾಗಿ ವರ್ಣಿಸುತ್ತ ಧಾರ್ಮಿಕ ನಾಟಕಗಳಲ್ಲಿ ಸಂಗೀತದ ಪ್ರಾಮುಖ್ಯವನ್ನು ವಿವರಿಸಿದರು.

ಅಧ್ಯಕ್ಷ ಭಾಷಣ ಮಾಡುತ್ತ ಶ್ರೀಮತಿ ಜಮುನ ಅವರು ಧಾರ್ಮಿಕನಾಟಕರಂಗದ ಪುನರುತ್ಥಾನಕ್ಕೆ ತಿ. ತಿ. ದೇ, ಗಳ ನೆರವನ್ನು ಶ್ಲಾಘಿಸಿದರು. ನಾಟಕ ಅಕ್ಯಾಡಮಿಯ ಕಮಲಾ ಚಂದ್ರಬಾಬು ಅವರು ಉದ್ಘಾಟನಾಸಭೆಯನ್ನು ವಂದಿಸಿದರು. ನಂತರ ಮಲ್ಲಾದಿ ಸೂರ್ಯನಾರಾಯಣರು ಹರಿಶ್ಚಂದ್ರ ನಾಟಕದ ಒಂದು ಪ್ರಸಂಗವನ್ನು ಅಭಿನಯಿಸಿದರು.



ಫೆಬ್ರವರಿ 1 ರಂದು ತಿರುಮಲೆಯಲ್ಲಿ ರಥಸಪ್ತಮಿ ಉತ್ಸವ ಬಹು ಜನಾಕರ್ಷಕವಾಗಿ ನಡೆಯಿತು. ಮೇಲಿನ ಚಿತ್ರದಲ್ಲಿ ಉತ್ಸವದ ಪ್ರಯುಕ್ತ ಯೋಜಿಸಲಾದ ಬೆಳ್ಳಿಯ ರಥದಲ್ಲಿ ಸೂರ್ಯಪ್ರಭ ವಾಹನಾರೂಢ ಶ್ರೀ ವೆಂಕಟೇಶ್ವರಸ್ವಾಮಿಯನ್ನು ಕಾಣಬಹುದು.

ಶೃಂಗೇರಿಯ ಶಾರದಾಪೀಠದ ಶ್ರೀಪಾದಂಗಳವರು ಈಚೆಗೆ ತಿರುಮಲೆಗೆ ಭೇಟಿ ನೀಡಿದರು. ಶ್ರೀ ವೆಂಕಟೇಶ್ವರಸ್ವಾಮಿಯನ್ನು ಆರಾಧಿಸಲು ಬರುತ್ತಿರುವ ಆಚಾರ್ಯದ್ವಯರೊಂದಿಗೆ ತಿ. ತಿ. ದೇ. ಕಾರ್ಯನಿರ್ವಾಹಕ ಮಂಡಳಿಯ ಅಧ್ಯಕ್ಷ ಶ್ರೀ ಬಿ. ನಾಗಿರೆಡ್ಡಿ ಹಾಗೂ ಕಾರ್ಯನಿರ್ವಹಣಾಧಿಕಾರಿ ಶ್ರೀ ಪಿ. ವಿ. ಆರ್. ಕೆ. ಪ್ರಸಾದ್ ಅವರನ್ನು ಕಾಣಬಹುದು.





ಹರಿದಾಸ ವಸ್ತು ಪ್ರದರ್ಶನವನ್ನು ಉದ್ಘಾಟಿಸಿ ಅದನ್ನು ವೀಕ್ಷಿಸುತ್ತ ನಡೆದಿರುವ ಮಂತ್ರಿವರ್ಯ ಶ್ರೀ ಭಾಟ್ಟಂ ಶ್ರೀರಾಮಮೂರ್ತಿ. ಅವರ ಎಡಪಾರ್ಶ್ವದಲ್ಲಿ ತಿ. ತಿ. ದೇ ಸಂಕ್ಷೇಮಾಧಿಕಾರಿ ಶ್ರೀ ರಾಮಕೃಷ್ಣಯ್ಯನವರನ್ನೂ ಕಾಣಬಹುದು.

ಕೆಲಸ ಇತರರಿಗೆ ಮಾದರಿಯಾಗಿ ಇನ್ನೂ ಹೆಚ್ಚಿನ ಸಂಶೋಧನೆ, ವಿಮರ್ಶೆ, ವ್ಯಾಖ್ಯಾನಗಳಾಗ ಬೇಕೆಂದು ಕರೆನೀಡಿದರು. ಕರ್ನಾಟಕ ಸಂಗೀತದ ಪ್ರತಿಷ್ಠಾಪನಾಚಾರ್ಯ ಪುರಂದರ ದಾಸರನ್ನು ಉಚಿತವಾಗಿ ನೆನೆದರು.

ಅಂದು ಸಂಜೆ 6–30 ರಿಂದ 9 ಗಂಟೆಯವರೆಗೆ ತಿರುಪತಿಯ ದಾಸಸಾಹಿತ್ಯ ಪ್ರಾಜೆಕ್ಟ್ ವತಿಯಿಂದ ಪುರಂದರದಾಸರು ತೆಲುಗು ನಾಟಕವನ್ನು ಪ್ರದರ್ಶಿಸಲಾಯಿತು. ಎಸ್. ವಿ. ರಂಗಭಟ್ಟರ್ ಅವರ ನಾಯಕ ನಿರ್ದೇಶನದಲ್ಲಿ ನಡೆದ ನಾಟಕ ಪ್ರೇಕ್ಷಕರನ್ನು ಆನಂದಗೊಳಿಸಿತೆನ್ನಬೇಕು.

23–1–82 ರಿಂದ ಮೂರುದಿನಗಳ ಕಾಲ ದಿನಕ್ಕೊಂದು ಗಂಟೆಯಂತೆ ಬಿ. ಎನ್. ಕೆ. ಶರ್ಮರ 'ಉಪನಿಷದ್ರಹಸ್ಯ' ಹಾಗೂ ನಿಜಗಲ್ ನರಸಿಂಹಾಚಾರ್ಯರ 'ಜಗನ್ನಾಥದಾಸರ ಹರಿಕಥಾಮೃತಸಾರ' ಉಪನ್ಯಾಸಗಳು ನಡೆದವು. ಅಂದು ದಾಸಸಾಹಿತ್ಯ ಪ್ರಾಜೆಕ್ಟ್ ವಿಶೇಷಾಧಿಕಾರಿ ಕೆ. ಅಪ್ಪಣ್ಣಾಚಾರ್ಯರು ಹರಿದಾಸ ಪರಂಪರೆಯನ್ನು ಕುರಿತು ಮಾತನಾಡಿದರು.

# ವಿಶಾಖಪಟ್ಟಣದಲ್ಲಿ ಹರಿದಾಸ ಸಾಹಿತ್ಯ ಸಮ್ಮೇಳನ

ಮೈಸೂರಿನ ಶ್ರೀಗುರುಗೋವಿಂದ ವಿಠಲ ದಾಸರ ನೇತೃತ್ವದಲ್ಲಿ ಎಂದಿನಂತೆ ಈ ಬಾರಿಯೂ ಹರಿದಾಸ ಸಾಹಿತ್ಯ ಸಮ್ಮೇಳನ ಬಹು ಸಂಭ್ರಮ, ಉತ್ಸಾಹಗಳ ನಡುವೆ ಏಳುದಿನಗಳಕಾಲ ನಡೆಯಿತು. ಈ ಬಾರಿಯ ಸಮ್ಮೇಳನಕ್ಕೆ ಸ್ಥಳ ವಿಶಾಖಪಟ್ಟಣ. ಶ್ರೀ ಪುರಂದರದಾಸರ ಆರಾಧನೆಯನ್ನೂ ಒಳಗೊಂಡಂತೆ ನಡೆದ ಈ ಸಮ್ಮೇಳನದಲ್ಲಿನ ಗಮನಾರ್ಹ ಅಂಶಗಳೆಂದರೆ ತಿರುಪತಿಯ ದಾಸ ಸಾಹಿತ್ಯ ಪ್ರಾಜೆಕ್ಟ್‌ನ ವಸ್ತುಪ್ರದರ್ಶನ, ನಾಟಕಪ್ರದರ್ಶನ, ವಿದ್ವಾಂಸರಿಂದ ಉಪನ್ಯಾಸಗಳು, ವಿವಿಧ ಸಂಘ ಸಂಸ್ಥೆಗಳಿಂದಾದ ಭಜನೆ, ಕೀರ್ತನೆ, ನೃತ್ಯ, ಸಂಗೀತಸಭೆಗಳಾಗಿದ್ದು ಸಮ್ಮೇಳನ ಇಡಿಯಾಗಿ 21–1–82 ರಿಂದ 26–1–82 ಅಖಂಡವಾಗಿ ನಡೆಯಿತು ಎನ್ನಬಹುದು.

22–1–82 ರ ಬೆಳಗ್ಗೆ ದಾಸ ಸಾಹಿತ್ಯ ಪ್ರಾಜೆಕ್ಟ್‌ನ ಹರಿದಾಸ ವಸ್ತು ಪ್ರದರ್ಶನವನ್ನು ಉದ್ಘಾಟಿಸಿದ ಆಂಧ್ರಪ್ರದೇಶದ ಸಂಸ್ಕೃತಿ ಇಲಾಖಾಮಂತ್ರಿ ಶ್ರೀ ಭಾಟ್ಟಂ ಶ್ರೀರಾಮಮೂರ್ತಿ ಅವರು ತಿ. ತಿ. ದೇವಸ್ಥಾನಗಳ ಧರ್ಮಪ್ರಸಾರ ಕಾರ್ಯದಲ್ಲಿನ ಈ ವಸ್ತು ಪ್ರದರ್ಶನಾಂಗವನ್ನು ಶ್ಲಾಘಿಸುತ್ತ ಇಂತಹ ವಸ್ತು ಪ್ರದರ್ಶನದಿಂದ ಒಂದು ರೀತಿಯ ಸಾಂಸ್ಕೃತಿಕ ಪರಂಪರೆಯ ಪರಿಚಯವಾಗುವುದೆಂದೂ, ಈ

ವಸ್ತು ಪ್ರದರ್ಶನದ ಇನ್ನೊಂದು ದೃಶ್ಯ. ಶ್ರೀ ಗುರುಗೋವಿಂದದಾಸರು (ಸುಲೋಚನಧಾರಿ) ಆಸಕ್ತಿಯಿಂದ ಚಿತ್ರಪಟಗಳನ್ನು ನೋಡುತ್ತಿರುವಿಕೆ.



# ದಕ್ಷಿಣ ಬದರಿ - ಮೇಲುಕೋಟೆ



ದಕ್ಷಿಣದ ಬದರೀಕ್ಷೇತ್ರವೆಂದು ಪ್ರಸಿದ್ಧಿ ಪಡೆದಿರುವ ಮೇಲುಕೋಟೆ ಕರ್ನಾಟಕದಲ್ಲೇಕೆ ಇಡೀ ಭಾರತದಲ್ಲಿಯೇ ಅತಿ ಪವಿತ್ರ ಕ್ಷೇತ್ರವೆಂದು ಹೆಸರುವಾಸಿಯಾಗಿದೆ. ಉತ್ತರ ಬದರಿ ಯಾತ್ರೆ ಮಾಡಿದನಂತರ ಈ ದಕ್ಷಿಣದ ಬದರಿಯನ್ನು ಸಂದರ್ಶಿಸದಿದ್ದರೆ ಯಾತ್ರೆಯ ಫಲವಿಲ್ಲವೆಂದು ಪ್ರತೀತಿ.

ಮಂಡ್ಯಜಿಲ್ಲೆಯಲ್ಲಿರುವ ಈ ಪುಣ್ಯಕ್ಷೇತ್ರ ಕೃತಯುಗದಲ್ಲಿ ವೇದಾದ್ರಿ ಎಂದೂ, ತ್ರೇತಾಯುಗದಲ್ಲಿ ನಾರಾಯಣಾದ್ರಿಯೆಂದೂ, ದ್ವಾಪರಯುಗದಲ್ಲಿ 'ಯಾದವಾದ್ರಿ' ಎಂದೂ, ಕಲಿಯುಗದಲ್ಲಿ ಯತಿಶೈಲ (ಮೇಲುಕೋಟೆ) ಎಂದೂ ಪ್ರಸಿದ್ಧಿ ಪಡೆದಿದೆ. ಇಂತಹ ದಿವ್ಯ ಕ್ಷೇತ್ರದಲ್ಲಿ ವರ್ಷಕ್ಕೊಮ್ಮೆ ನಡೆಯುವ 'ವೈರಮುಡಿ'ಉತ್ಸವ ಲಕ್ಷಾಂತರ ಮಂದಿ ಸ್ವದೇಶ–ವಿದೇಶಿಯರನ್ನು ಆಕರ್ಷಿಸುತ್ತದೆ. ಇಂತಹ ಜಗತ್ಪ್ರಸಿದ್ಧವಾದ ವೈರಮುಡಿ ಉತ್ಸವಕ್ಕೆ ಐತಿಹಾಸಿಕ ಹಿನ್ನೆಲೆಯುಂಟು.

ಕ್ಷೀರಾಬ್ಧಿಶಯನನಾದ ಶ್ರೀಮನ್ನಾರಾಯಣನು ಯೋಗ ನಿದ್ರೆಯಲ್ಲಿ ಪವಡಿಸಿದ್ದಾಗ ವಿರೋಚನ ನೆಂಬುವವನು ಸ್ವಾಮಿಯ ಕಿರೀಟವನ್ನು ಅಪಹರಿಸಿಕೊಂಡು ಪಾತಾಳಲೋಕಕ್ಕೆ ಹೋಗಿ ಅಲ್ಲಿ ಅಡಗಿಕೊಂಡ. ಇದನ್ನು ತಿಳಿದ ಸ್ವಾಮಿಯ ಅಂತರಂಗ ಭಕ್ತರು ಈ ವಿಷಯವನ್ನು ಸ್ವಾಮಿಯ ಅತ್ಯಂತ ಭಕ್ತನಾದ ವೈನತೇಯ (ಗರುಡ) ನಿಗೆ ತಿಳಿಸಿದರು. ಗರುಡನು ಪಾತಾಳ ಲೋಕಕ್ಕೆ ಹೋಗಿ ವಿರೋಚನನನ್ನು ಹಿಡಿದು ಅವನೊಡನೆ ಯುದ್ಧಮಾಡಿ ಭೂಲೋಕಕ್ಕೆ ಬಂದನು. ಅಗ ಸ್ವಾಮಿಯು ಕೃಷ್ಣಾವತಾರದಲ್ಲಿದ್ದುದು ಗುರುತ್ಮಂತನಿಗೆ ಗೋಚರಿಸಿತು. ಗುರುತ್ಮಂತನು ಆ ಕಿರೀಟವನ್ನು ಕೃಷ್ಣನ ತಲೆಗೇರಿಸಿದನು. ಅದು ಕೃಷ್ಣನಿಗೆ, ಹಿರಿದಾಗಲು, ಕೃಷ್ಣನು ಅವನ್ನು ತನ್ನ ಆರಾಧ್ಯಮೂರ್ತಿ ರಾಮಪ್ರಿಯನಿಗೆ ತೊಡಿಸಿದಾಗ ಅದು ಸರಿಯಾಗಿತ್ತು. ಅಂದಿನಿಂದ ಇಂದಿನ ವರೆವಿಗೂ ಸ್ವಾಮಿಗೆ ಆ 'ವೈರಮುಡಿ' ಧಾರಣೆಯಾಗುತ್ತಿದೆ. ವೈನತೇಯ (ಗರುಡ) ನಿಂದ ಬಂದ ಕಿರೀಟವಾದ್ದರಿಂದ ಅದಕ್ಕೆ 'ವೈನಮುಡಿ' ಎಂದು ಹೆಸರಾಗಿ ಕ್ರಮೇಣ ಜನತೆಯ ಬಾಯಲ್ಲಿ 'ವೈರಮುಡಿ' ಆಯಿತು. 'ವೈರ' ವೆಂದರೆ 'ವಜ್ರ' ಎಂಬ ಅರ್ಥವಿರುವುದರಿಂದ ವಜ್ರದಿಂದ ಕೂಡಿದ ಕಿರೀಟ (ಮುಡಿ) ಎಂದರೂ ತಪ್ಪಿಲ್ಲ. ವೈನತೇಯನಿಂದ ಬಂದ ಕಾರಣದಿಂದ ಇಂದಿಗೂ ಅವನ ಹೆಗಲ ಮೇಲೆ ಮುಡಿ ಧರಿಸಿದ ಸ್ವಾಮಿಯ ಉತ್ಸವ ವೈಭವದಿಂದ ಜರುಗುತ್ತದೆ. ವೈನತೇಯನು, ಹೆಗಲ ಮುಡಿ ಧರಿಸಿದ ಮೇಲೆ ಸ್ವಾಮಿಯನ್ನು ಶ್ರೀದೇವಿ - ಭೂದೇವಿಯರ ಮಧ್ಯೆ ಬಿಜಯಂಗೈಸಿಕೊಂಡು ಬರುವ ಉತ್ಸವ ನೋಡಲು ಆನಂದದಾಯಕವಾಗಿರುತ್ತದೆ.

ಹಿಂದೆ ಮುಸಲ್ಮಾನರ ದಾಳಿಗೂ, ಮರಾಠರ ದಾಳಿಗೂ ಸಿಕ್ಕಿ ಪಾಳು ಬಿದ್ದ ಊರಿನಲ್ಲಿ ಹುತ್ತವೊಂದು ಎತ್ತರವಾಗಿ ಬೆಳೆದು ನಿಂತಿತ್ತು. ಆ ಹುತ್ತದಲ್ಲಿ ತಿರು-ನಾರಾಯಣ ಸ್ವಾಮಿಯು ವಿಗ್ರಹ ರೂಪದಲ್ಲಿದ್ದು ಕೆಲವು ದಿನಗಳಾದ ನಂತರ ತೊಂಡನೂರಿನಲ್ಲಿ ತಂಗಿದ್ದ ವಿಶಿಷ್ಟಾದ್ವೈತ ಮತ

---

**ಮುಕುಂದ ಪುರೋಹಿತ್.**

---

ಪ್ರತಿಷ್ಠಾಪಕರಾದ ಶ್ರೀರಾಮಾನುಜಾಚಾರ್ಯರಿಗೆ ಸ್ವಪ್ನದಲ್ಲಿ ದರ್ಶನವಿತ್ತು 'ತಾನು ಇಂತಹ ಸ್ಥಳದಲ್ಲಿ ವಾಸವಾಗಿರುವೆನೆಂದೂ ತನ್ನನ್ನು ಹುತ್ತದಿಂದ ಬಿಡುಗಡೆ ಮಾಡಿ ಊರನ್ನು ಉದ್ಧಾರಮಾಡು' ಎಂದಂತಾಯಿತು. ತಕ್ಷಣ ರಾಮಾನುಜರು ಆ ಸ್ಥಳಕ್ಕೆ ಬೇಟಿನೀಡಿ ಹುತ್ತವನ್ನು ಪತ್ತೆ ಹಚ್ಚಿ ಹಾಲಿನಿಂದ ಕರಗಿಸಿ ದಿವ್ಯ - ಭವ್ಯ

ನ ೇದ ಶ್ರೀ ತಿರುನಾರಾಯಣ ಸ್ವಾಮಿಯನ್ನು ಕಂಡು ಕಣ್ತುಂಬ ದರ್ಶಿಸಿ ಆನಂದ ಬಾಷ್ಪ ಸುರಿಸಿದರು. ಅಂದು ಪುನರ್ವಸು ನಕ್ಷತ್ರ, (ಊರನ್ನು ಉದ್ಧಾರಮಾಡಿದ ದಿನವಾದು ದರಿಂದ ಇಂದಿಗೂ ಪುನರ್ವಸು ನಕ್ಷತ್ರದಂದು ರಾಮಾನುಜರ ವಿಜೃಂಭಣೆಯ ಉತ್ಸವ ಆಚರಿಸುತ್ತಾರೆ) ಇದಾದ ಕೆಲವು ದಿನಗಳ ನಂತರ ರಾಮಾನುಜರಿಗೆ ಮತ್ತೊಂದು ಜಿಜ್ಞಾಸೆ ಉಂಟಾಯಿತು. ಅದೇನೆಂದರೆ ಇಂತಹ ದಿವ್ಯಮೂರ್ತಿಗೆ ಉತ್ಸವ ಮೂರ್ತಿ ಇಲ್ಲದಿರುವುದು. ಅದೇ ಚಿಂತೆಯಲ್ಲಿದ್ದ ಅವರಿಗೆ ಸ್ವಾಮಿಯು ಸ್ವಪ್ನದಲ್ಲಿ ದರ್ಶನ ಕೊಟ್ಟು 'ದಿಲ್ಲಿಯ ಸುಲ್ತಾನನ ಬಳಿ ನಾನು ಬಂದಿಯಾಗಿರುವೆ. ನನ್ನನ್ನು ಬಿಡಿಸಿ ಇಲ್ಲಿಗೆ ಕರೆದು ತಾ' ಎಂದಂತಾಯಿತು. ರಾಮಾನುಜರಿಗೆ ಸಂತಸವಾಗಿ ದಿಲ್ಲಿಗೆ ಪ್ರಯಾಣ ಬೆಳೆಸಿದರು.

ದಿಲ್ಲಿಯ ಸುಲ್ತಾನನ ಬಳಿ ಬಂದು ರಾಮಪ್ರಿಯ ವಿಗ್ರಹಕ್ಕಾಗಿ ರಾಮಾನುಜರು ನಿವೇದಿಸಿಕೊಂಡರು. ಸುಲ್ತಾನನು ಮಗಳ ಪ್ರೀತಿಯ ವಿಗ್ರಹವಾಗಿದ್ದ ಅದೊಂದನ್ನು ಬಿಟ್ಟು ಮಿಕ್ಕೆಲ್ಲಾ ವಿಗ್ರಹಗಳನ್ನು ರಾಮಾನುಜರ ಮುಂದಿಟ್ಟ. ಆದರೆ ಆ ಗುಂಪಿನಲ್ಲಿ 'ರಾಮಪ್ರಿಯ' ಇರಲಿಲ್ಲ. ರಾಮಾನುಜರಿಗೆ ದಿಕ್ಕೇ ತೋಚಲಿಲ್ಲ. ಸುಲ್ತಾನನು ಎಲ್ಲಿದ್ದರೂ ನೀವೇ ತೆಗೆದುಕೊಳ್ಳಿ ಎನ್ನಲು, ರಾಮಾನುಜರು ಭಕ್ತಿ ಪರವಶರಾಗಿ "ಓ ನನ್ನ ಕಂದಾ... ಶೆಲ್ವಪಿಳ್ಳೆಯೇ... ರಾಮಪ್ರಿಯಾ... ಬಾಪ್ಪಾ" ಎಂದು ಮುದ್ದಾಗಿ ಕರೆದಾಗ ಅಂತಃಪುರದಲ್ಲಿದ್ದ ರಾಮಪ್ರಿಯ ನಲಿನಲಿದು ರಾಮಾನುಜರ ತೊಡೆಯೇರಿದನಂತೆ. ಸುಲ್ತಾನನು ಇವರ ಭಕ್ತಿಗೆ ಮೆಚ್ಚಿ ವಿಗ್ರಹವನ್ನು ವಿಜೃಂಭಣೆಯಿಂದ ಮೇಲುಕೋಟೆಗೆ ಕಳುಹಿಸಿಕೊಟ್ಟನು. ಆದರೆ ಸುಲ್ತಾನನ ಮಗಳು ಬೀಬಿ ನಾಚ್ಚಿಯಾರ್ (ವರನಂದಿನಿ) ರಾಮಪ್ರಿಯನ ವಿಗ್ರಹವನ್ನು ಬಿಟ್ಟಿರಲಾರದೆ ಮೇಲುಕೋಟೆಗೆ ವಿಗ್ರಹದ ಹಿಂದೆಯೇ ತೆರಳಿದಳು. ವಿಗ್ರಹವನ್ನು ಮೇಲುಕೋಟೆಗೆ ತೆಗೆದುಕೊಂಡು ಬರುವಾಗ ಕೆಲವಾರು ಕಷ್ಟಗಳು ರಾಮಾನುಜರನ್ನು ಹಿಂಬಾಲಿಸಿದವು. ಅಂತಹ ಸಮಯದಲ್ಲಿ ಅವರಿಗೆ ಸಹಾಯಕರಾಗಿ ನಿಂತವರು ಹರಿಜನರು. ಹರಿಜನರ ಪ್ರೋತ್ಸಾಹದಿಂದ ವಿಗ್ರಹ ಮೇಲುಕೋಟೆಯನ್ನು ತಲುಪಿತು. ಅದಕ್ಕಾಗಿಯೇ ವೈರಮುಡಿ (ಜಾತ್ರೆ)ಯ ಸಮಯದಲ್ಲಿ ಮೂರುದಿನ ಅವರಿಗೆ ವಿಶೇಷ ಪ್ರವೇಶಾವಕಾಶವುಂಟು. ರಾಮಾನುಜರು ಅವರ ಸಹಾಯವನ್ನು ಮೆಚ್ಚಿ ಕೃತಜ್ಞರಾಗಿ ಅವರಿಗೆ 'ತಿರುಕುಲತ್ತಾರ್' (ಶ್ರೇಷ್ಠ ಕುಲದವರು) ಎಂದು ನಾಮಕರಣ ಮಾಡಿದರು. ವರನಂದಿನಿ ದೇವರನ್ನು ಬಿಡದೆ ಕೊನೆಗೆ ದೇವರ ಪಾದದಲ್ಲಿಯೇ ಐಕ್ಯವಾದಳು. ಇಂದಿಗೂ ದೇವರ ಪಾದಪದ್ಮದಲ್ಲಿ 'ವರನಂದಿನಿ' ಯನ್ನು ಕಾಣಬಹುದು. ಇಂತಹ ಭವ್ಯ ಉತ್ಸವ ಮೂರ್ತಿಗೆ ವೈರಮುಡಿ ಒಂದೇ ಅಲ್ಲದೆ 'ರಾಜಮುಡಿ' 'ಕೃಷ್ಣರಾಜ ಮುಡಿ' ಎಂಬ ಕಿರೀಟಧಾರಣೆಯಾಗುವುದು. ರಾಜಮುಡಿಯನ್ನು ಮೈಸೂರಿನ ರಾಜ ಒಡೆಯರೂ, ಕೃಷ್ಣರಾಜಮುಡಿಯನ್ನು ಮುಮ್ಮಡಿ ಕೃಷ್ಣರಾಜ ಒಡೆಯರೂ ಅರ್ಪಿಸಿದ್ದಾರೆ. 'ರಾಜಮುಡಿ'ಯನ್ನು ಅಷ್ಟ

(36ನೇ ಪುಟ ನೋಡಿ)

# ನಾದಬ್ರಹ್ಮ ತ್ಯಾಗಯ್ಯನವರು

ಅಜರಾಮರವೂ, ಜೀವಕಳೆಯೂ ಎನಿಸಿರುವ ಕರ್ನಾಟಕ ಸಂಗೀತ ಸುಧೆಯನ್ನು ಹರಿಸಿದ ವಾಗ್ಗೇಯಕಾರರು ಅನೇಕಮಂದಿ. ಅದರಲ್ಲಿಯೂ ಕ್ರಿ. ಶ. 1750 ರಿಂದ ಕ್ರಿ. ಶ. 1850 ರವರೆಗಿನ ಕಾಲವಂತೂ 'ಸಂಗೀತಯುಗ' ಎಂದೇ ಕರೆಯಿಸಿ ಕೊಳ್ಳುವಷ್ಟರ ಮಟ್ಟಿಗೆ ಆ ಕಾಲದಲ್ಲಿ ಸಂಗೀತವು ಪ್ರಮುಖವಾಗಿ ಬೆಳಕು ಕಂಡಿತು. ಈ ಅವಧಿ ಯಲ್ಲಿ, ತಮ್ಮ ಜೀವನ ಸರ್ವಸ್ವವನ್ನೂ ಸಂಗೀತಕ್ಕಾಗಿ ಮೀಸಲಾಗಿರಿಸಿ ಕರ್ನಾಟಕ ಸಂಗೀತದ ತ್ರಿಮೂರ್ತಿಗಳೆನಿಸಿಕೊಂಡವರಲ್ಲಿ ತ್ಯಾಗರಾಜರೂ ಒಬ್ಬರು.

ತ್ಯಾಗರಾಜರು 1767 ರಲ್ಲಿ ತಂಜಾವೂರಿನಲ್ಲಿ ಹುಟ್ಟಿದರು. ಇವರ ತಂದೆ ರಾಮಬ್ರಹ್ಮ. ತಾಯಿ ಸೀತಮ್ಮ. ತಾಯಿಗೆ ಸಂಗೀತದಲ್ಲಿ ಸಾಕಷ್ಟು ಪರಿಣತೆಯಿತ್ತು. ತಂದೆ ರಾಮಬ್ರಹ್ಮರೂ ಭಗವನ್ನಾಮಸಂಕೀರ್ತನೆ ಮಾಡುತ್ತಿದ್ದವರೇ. ರಾಮಾಯಣ ಪ್ರವಚನವನ್ನೂ ಮಾಡುತ್ತಿದ್ದರು ಅವರು. ಬಾಲಕ ತ್ಯಾಗರಾಜನಿಗೆ ಚಿಕ್ಕಂದಿನಿಂದಲೇ ರಾಮನ ಕಥೆ ಚೆನ್ನಾಗಿ ಅರ್ಥವಾಗಿತ್ತು. ರಾಮಭಕ್ತಿ ಎಳೆಯ ಮನದಲ್ಲಿ ಬೆಳೆಯ ತೊಡಗಿತ್ತು.

ತ್ಯಾಗರಾಜರಿಗೆ ಇಬ್ಬರು ಅಣ್ಣಂದಿರಿದ್ದರು, ಪಂಚಾಪಕೇಶ ಮತ್ತು ರಾಮನಾಥ ಎಂದು.

ತ್ಯಾಗರಾಜರು, ತಾವು ರಾಮಬ್ರಹ್ಮರ ಮಗನೆಂಬುದನ್ನು "ದೊರಕುನ ಇಟುವಂಟಿ ಸೇವ। ರಾಮಬ್ರಹ್ಮ ತನಯುಡು॥ ತ್ಯಾಗರಾಜು ತಾ ಬಾಡುಚು ನೂಚಗ" ಎಂಬ ಕೃತಿಯಲ್ಲಿಯೂ ಸೀತಮ್ಮ ತಮ್ಮ ತಾಯಿಯೆಂಬುದನ್ನು ಸೂಚ್ಯವಾಗಿ "ಸೀತಮ್ಮ ಮಾಯಮ್ಮ" ಎಂದೂ ತಿಳಿಸಿದ್ದಾರೆ.

'ಬೆಳೆಯುವ ಪೈರು ಮೊಳಕೆಯಲ್ಲಿಯೇ' ಎಂಬಂತೆ, ತ್ಯಾಗರಾಜರಲ್ಲಿ ಬಾಲ್ಯದಲ್ಲಿಯೇ ವಾಗ್ಗೇಯಕಾರನಿಗೆ ಬೇಕಾದ ಪ್ರತಿಭೆಯಿದ್ದಿತು. ಅವರಿಗೆ ಹತ್ತು ವರ್ಷಗಳೂ ತುಂಬಿಲ್ಲದೇ ಇದ್ದಾಗಲೇ "ನಮೋ ನಮೋ ರಾಘವಾಯ ಅನಿಶಂ" ಮತ್ತು "ತವ ದಾಸೋಹಂ" ಎಂಬ ಎರಡು ಕೃತಿಗಳನ್ನು ಗೋಡೆಯ ಮೇಲೆ ಬರೆದು ತಂದೆಯ ಮೆಚ್ಚುಗೆಯನ್ನು ಪಡೆದರು. ಸ್ವತಃ ವಿದ್ವಾಂಸರಾಗಿದ್ದ ರಾಮಬ್ರಹ್ಮರು ಮಗ ತ್ಯಾಗರಾಜನಿಗೆ ತೆಲುಗು, ಸಂಸ್ಕೃತಗಳನ್ನು ಹೇಳಿಕೊಟ್ಟರು. ತ್ಯಾಗರಾಜರ ಮೇಲೆ, ತಾಯಿ ಸೀತಮ್ಮನ ಪ್ರಭಾವವೇನೂ ಕಡಿಮೆಯದಾಗಿರಲಿಲ್ಲ. ಪುರಂದರದಾಸರ ಕೃತಿಗಳನ್ನು ತಾಯಿಯಿಂದ ಕಲಿತರು ತ್ಯಾಗರಾಜರು.




ಆ ಕಾಲದಲ್ಲಿ ಶೊಂಠಿ ವೆಂಕಟರಮಣಯ್ಯನವರು ಘನವಿದ್ವಾಂಸರೂ ವೈಣಿಕರೂ ಆಗಿದ್ದರು. ಅವರ ಸಂಗೀತವನ್ನು ಬಾಲಕ ತ್ಯಾಗರಾಜ ಆಸಕ್ತಿಯಿಂದ ಕೇಳುತ್ತಿದ್ದುದನ್ನು ಕಂಡು ರಾಮಬ್ರಹ್ಮರು, ಅವನನ್ನು ಶಿಷ್ಯನನ್ನಾಗಿ ಸ್ವೀಕರಿಸಬೇಕೆಂದು ಕೇಳಿಕೊಂಡರು. ಶೊಂಠಿ ವೆಂಕಟರಮಣಯ್ಯ

---

**ಎಂ. ಆರ್. ಜಯಶ್ರೀ**

---

ತ್ಯಾಗರಾಜರಿಗೆ ಗುರುವಾದರು. ತ್ಯಾಗರಾಜರ ಸಂಗೀತಜ್ಞಾನ ಆಳವಾಯಿತು. ಗುರುಶಿಷ್ಯ ಸಂಬಂಧವೂ ವೈಶಿಷ್ಟ್ಯಪೂರ್ಣವಾಗಿತ್ತು. "ದೊರಕುನಾ ಇಟುವಂಟಿ ಸೇವಾ" ಎಂದು ಗುರುಗಳ ವಿಚಾರದಲ್ಲಿ ವಿನಮ್ರನಾಗಿ ಭಯಭಕ್ತಿಯಿಂದ ಶಿಷ್ಯನು ಹಾಡಿದರೆ, "ದೊರಕುನಾ ಇಟುವಂಟಿ ಶಿಷ್ಯುಡು" ಎಂದು ಗುರು ಹೊಗಳಿದರು. ಗುರುಗಳಿಂದಲೇ ಆ ರೀತಿ ಹೊಗಳಿಸಿಕೊಂಡ ತ್ಯಾಗರಾಜರ ಪ್ರತಿಭೆ ಅಸಾಧಾರಣವಾದುದು.

ತ್ಯಾಗರಾಜರಿಗೆ ಎಂಟನೆಯ ವರ್ಷದಲ್ಲಿ ಉಪನಯನ ನಡೆಯಿತು. ಅವರಿಗೆ ಹದಿನೆಂಟು ವರ್ಷಗಳಾಗಿದ್ದಾಗ ಮದುವೆಯಾಯಿತು. ಅವರ ಪತ್ನಿಯ ಹೆಸರು ಪಾರ್ವತಿ. ಪಾರ್ವತಿಗೆ ಸೀತಾಲಕ್ಷ್ಮಿ ಎಂಬ ಮಗಳು ಹುಟ್ಟಿದಳು. ಅವಳನ್ನು ಅಖಿಲಾಂಡಪುರಂ ಕುಪ್ಪುಸ್ವಾಮಯ್ಯ ಮದುವೆಯಾದರು. ಅವರಿಗೆ ಪಂಚಾಪಕೇಶನೆಂಬ ಹೆಸರಿನ ಮಗನಿದ್ದನೆಂದೂ, ಅವನಿಗೆ ಸಂಗೀತದಲ್ಲಿ ಒಳ್ಳೆಯ ಜ್ಞಾನ ಇದ್ದಿತೆಂದೂ ಅವನು ಚಿಕ್ಕಂದಿನಲ್ಲಿಯೇ ಅಕಾಲ ಮರಣಕ್ಕೆ ಈಡಾದನೆಂದೂ ತಿಳಿದು ಬರುತ್ತದೆ. ಅಂತೂ ತ್ಯಾಗರಾಜರ ಸಂತತಿ ಮುಂದೆ ಬೆಳೆಯಲಿಲ್ಲ ಎಂಬುದು ಖಚಿತ.

ಸಂಗೀತ ವಿದ್ವಾಂಸರಿಗೆ ರಾಜಾಶ್ರಯ ದೊರೆಯುತ್ತಿದ್ದ ಕಾಲವದು. ಕ್ರಿ. ಶ. 1600 ರಿಂದ 1900 ರವರೆಗೆ ತಂಜಾವೂರಿನಲ್ಲಿ ಸಂಗೀತಕ್ಕೆ ರಾಜರಿಂದ ಒಳ್ಳೆಯ ಪ್ರೋತ್ಸಾಹ ದೊರೆಯುತ್ತಿದ್ದ ಕಾಲ. ಈ ಅವಧಿಯಲ್ಲಿ ರಾಜ್ಯವಾಳಿದ ರಾಜರು ಸ್ವತಃ ವಿದ್ವಾಂಸರೂ, ರಸಿಕತೆಯನ್ನು ಹೊಂದಿದವರೂ ಆಗಿದ್ದರು. ಹೊರನಾಡಿನಿಂದ ಬರುತ್ತಿದ್ದ ವಿದ್ವಾಂಸರಿಗೂ ಆಶ್ರಯ, ಪ್ರೋತ್ಸಾಹ ದೊರೆಯುತ್ತಿತ್ತು. ತ್ಯಾಗರಾಜರು ಬಾಲಕರಾಗಿದ್ದಾಗ ತಂಜಾವೂರಿನ ರಾಜನ ಆಸ್ಥಾನದಲ್ಲಿ 360 ಮಂದಿ ನುರಿತ ಸಂಗೀತ ವಿದ್ವಾಂಸರಿದ್ದರು! ವಿದ್ವಾಂಸರು ಹೆಚ್ಚಿದಷ್ಟೂ ಅವರಲ್ಲಿ ಸ್ಪರ್ಧಾ ಮನೋಭಾವನೆಯೂ ಬೆಳೆದಿತ್ತು. ಒಬ್ಬರನ್ನು ಮೀರಿಸಿ ಇನ್ನೊಬ್ಬರು ಹಾಡಿ ರಾಜನ ಮೆಚ್ಚುಗೆ ಗಳಿಸಬೇಕೆಂದು ಪ್ರತಿಯೊಬ್ಬರೂ ಅಖಂಡ ಸಾಧನೆ ನಡೆಸುತ್ತಿದ್ದರು. ಒಬ್ಬೊಬ್ಬರೂ ತಮಗೆ ಪ್ರಿಯವಾದ ರಾಗಗಳನ್ನು ಆರಿಸಿಕೊಂಡು, ಅನೋಘವಾದ ಸಾಧನೆಯನ್ನು ನಡೆಸಿ, ರಾಜನ ಮುಂದೆ ತಮ್ಮ ಪಾಂಡಿತ್ಯವನ್ನು ಪ್ರದರ್ಶಿಸುತ್ತಿದ್ದರು. ಅವರಿಗೆ ಕರಗತವಾಗಿರುವ ರಾಗಗಳಿಂದಲೇ ಹೆಸರಿಸಿ ರಾಜನು ಅವರನ್ನು ಸನ್ಮಾನಿಸುತ್ತಿದ್ದನು. ಅಠಾಣ ಅಪ್ಪಯ್ಯ, ತೋಡಿ ಸೀತಾರಾಮಯ್ಯ, ಶಂಕರಾಭರಣಂ ನರಸಯ್ಯ – ಮೊದಲಾದವರು ಅಲ್ಲಿದ್ದರು. ಇಂತಹ ಸಂದರ್ಭದಲ್ಲಿ ತಂಜಾವೂರಿನ ರಾಜ ಶರಭೋಜನಿಗೆ ತ್ಯಾಗರಾಜರು ಸಂಗೀತದಲ್ಲಿ ಪಡೆದುಕೊಂಡಿದ್ದ ಅದ್ಭುತ ಸಾಮರ್ಥ್ಯದ ವಿಚಾರ ತಿಳಿಯಿತು. ಅವರನ್ನು ಅರಮನೆಗೆ ಕರೆಸಿ, ಹಾಡಿಸಿ ವಿಶೇಷವಾಗಿ ಗೌರವಿಸಬೇಕೆಂದು ಆಹ್ವಾನವನ್ನು ಕಳುಹಿಸಿದನು. ಎಲ್ಲ ವಿದ್ವಾಂಸರೂ ಯಾವ ಗೌರವಕ್ಕಾಗಿ ಚಾತಕ ಪಕ್ಷಿಗಳಂತೆ ಕಾಯುತ್ತಿದ್ದರೋ ಅಂತಹ ಗೌರವವನು

# ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕ ಆಧ್ಯಾತ್ಮಿಕ. ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸ ಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

ಪಡೆಯುವ ಅವಕಾಶ ತ್ಯಾಗರಾಜರಿಗೆ ಅನಪೇಕ್ಷಿತವಾಗಿ ಮನೆಯ ಬಾಗಿಲಿಗೇ ಬಂದಿತ್ತು! ಆದರೆ ತ್ಯಾಗರಾಜರು ನರಸ್ತುತಿಯನ್ನು ಹೇಗೆ ಇಷ್ಟಪಡುತ್ತಿರಲಿಲ್ಲವೋ ಹಾಗೆಯೇ ಧನಕನಕಾದಿಗಳ ಮೇಲೆಯೂ ಅವರಿಗೆ ಮೋಹ ಎಳ್ಳಷ್ಟೂ ಇರಲಿಲ್ಲ. ಅಂತೆಯೇ, ರಾಜನ ಆಹ್ವಾನವನ್ನು ಸ್ವೀಕರಿಸದೇ "ನಿಧಿ ಚಾಲ ಸುಖಮಾ" ಎಂದು ಹಾಡಿದರು. ಆಹ್ವಾನಿಸಲು ಬಂದವರನ್ನು ಹಾಗೆಯೇ ಹಿಂತಿರುಗಿಸಿದರು.

ಕೋಪ ಪರವಶನಾದ ರಾಜ ಶರಭೋಜರು ತ್ಯಾಗರಾಜರನ್ನು ಬಲಾತ್ಕಾರದಿಂದ ಕರೆತರಬೇಕೆಂದು ಸೇವಕರನ್ನು ಅಟ್ಟಿದನೆಂದೂ, ಕೂಡಲೇ ಅವನಿಗೆ ಅಧಿಕತರವಾದ ಹೊಟ್ಟೆನೋವು ಉಂಟಾಗಿ, ತ್ಯಾಗರಾಜರನ್ನು ಕರೆತರಲು ಕಳುಹಿಸಿದ್ದ ಸೇವಕರನ್ನು ವಾಪಸ್ಸು ಬರುವಂತೆ ಹೇಳಿ ಕಳುಹಿಸಿದ ಮೇಲೆ ಹೊಟ್ಟೆನೋವು ವಾಸಿಯಾಯಿತೆಂದೂ ಐತಿಹ್ಯವಿದೆ.

ರಾಜನಿಂದ ಬರುತ್ತಿದ್ದ ಅಪಾರ ಧನಕನಕಾದಿಗಳನ್ನು ತಿರಸ್ಕರಿಸಿ ತ್ಯಾಗರಾಜರು ತಮ್ಮ ಆರಾಧ್ಯ ಮೂರ್ತಿಯಾದ ಶ್ರೀರಾಮಚಂದ್ರನ ಮುಂದೆ ಹಾಡುತ್ತಾ ಕುಳಿತಿದ್ದನ್ನು ಕಂಡು, ಅಣ್ಣ, ಪಂಚಾಪಕೇಶನು ರೇಗಿ, ರಾಮಚಂದ್ರ ಮೂರ್ತಿಯನ್ನು ಪ್ರವಾಹ ಉಕ್ಕುತ್ತಿದ್ದ ಕಾವೇರಿನದಿಗೆ ಬಿಸಾಡಿದನೆಂದೂ, ಆ ಸಂದರ್ಭದಲ್ಲಿ ತ್ಯಾಗರಾಜರು ರಾಮಚಂದ್ರನ ಅಗಲುವಿಕೆಯನ್ನು ಸಹಿಸಲಾರದೇ ಅನೇಕ ಹಾಡುಗಳನ್ನು ರಚಿಸಿ ಹಾಡಿದರೆಂದೂ ಪ್ರತೀತಿಯಿದೆ. ಆ ಸಂದರ್ಭಕ್ಕೆ ಹೊಂದುವಂತಹ, "ನೇನೆಂದು ವೆದುಕುದುರಾ" ಎಂಬ ಕೀರ್ತನೆ ಜನಪ್ರಿಯವಾಗಿದೆ. ಇದಲ್ಲದೆ, ಅಣ್ಣನಿಂದ ತ್ಯಾಗರಾಜರು ಎಷ್ಟೋ ವಿಧವಾದ ಕಷ್ಟಗಳನ್ನು ಅನುಭವಿಸಬೇಕಾಯಿತೆಂಬುದೂ ಅವರ ಕೃತಿಗಳಿಂದ ತಿಳಿದು ಬರುತ್ತದೆ.

ಸರಳವಾದ, ಭಕ್ತಿಯುತವಾದ ಜೀವನ ತ್ಯಾಗರಾಜರದು. ಪೂರ್ವಜರಿಂದ ದೊರಕಿದ ಒಂದು ಮನೆ, ಸ್ವಲ್ಪಭಾಗ ಭೂಮಿ ಅಷ್ಟೇ ಅವರಿಗೆ ಇದ್ದ ಆಸ್ತಿ. ತ್ಯಾಗರಾಜರ ವಿದ್ವತ್ ಪ್ರತಿಭೆಯನ್ನು ಅರಿತ ಜನರು ಅಪಾರ ಸಂಖ್ಯೆಯಲ್ಲಿ ಬಂದು ಅವರ ಶಿಷ್ಯರಾಗಿದ್ದರು. ಅವರನ್ನೂ, ಕುಟುಂಬದವರನ್ನೂ ಪೋಷಿಸಲು ಉಂಛವೃತ್ತಿ ನೆರವಾಯಿತು. ನಿಷ್ಠೆಯಿಂದ ಕೂಡಿದುದೂ, ನಿಯಮಬದ್ಧವೂ ಆದ ಉಂಛವೃತ್ತಿಯನ್ನು ಅನುಸರಿಸುವುದು ಸುಲಭವಲ್ಲ. ಭಗವಂತನ ನಾಮ ಸಂಕೀರ್ತನೆ ಮಾಡುತ್ತಾ ಈ ಮಹಾನ್ ವಾಗ್ಗೇಯಕಾರರು ರಸ್ತೆಯಲ್ಲಿ ಹೊರಟಾಗ, ಜನ ತಾವಾಗಿಯೇ ಬಂದು ಅಕ್ಕಿ, ಬೇಳೆ ಮೊದಲಾದುವನ್ನು ಭಕ್ತಿಯಿಂದ ಕೊಡುತ್ತಿದ್ದರು.

ನಡುಗಾಲದ ಹೊತ್ತಿಗೆ ತ್ಯಾಗರಾಜರು ಅತ್ಯುತ್ತಮ ವಾಗ್ಗೇಯಕಾರರೆಂದು ಪ್ರಖ್ಯಾತಿ ಪಡೆದಿದ್ದರು. ತಂಜಾವೂರಿನ ರಾಜನೂ ಕೂಡ ತ್ಯಾಗರಾಜರ ಹಾಡನ್ನು ಕೇಳಲು ಅವರಿದ್ದಲ್ಲಿಗೇ ಬರುತ್ತಿದ್ದನೆಂಬುದೂ, ದೂರದ ಸ್ಥಳಗಳಿಂದ ವಿದ್ವಾಂಸರೂ, ಗಾಯಕರೂ ಬಂದು ತ್ಯಾಗರಾಜರಿಗೆ ಮರ್ಯಾದೆ ಸಲ್ಲಿಸುತ್ತಿದ್ದರೆಂಬುದೂ ಈ ಮಾತಿಗೆ ಇಂಬುಗೊಡುತ್ತದೆ.

ತ್ಯಾಗರಾಜರು ಕಾಂಚೀಪುರ, ವಾಲಾಜಪೇಟೆ, ತಿರುಪತಿ, ಪುತ್ತೂರು ಮೊದಲಾದ ಯಾತ್ರಾಸ್ಥಳಗಳನ್ನು ಭೇಟಿಮಾಡಿದರೆಂದೂ, ಕೆಲವೆಡೆಗಳಲ್ಲಿ ಅವರ ವ್ಯಕ್ತಿತ್ವದ ಹಿರಿಮೆಯನ್ನು ಬೆಳಕಿಗೆ ತರುವ ಪವಾಡಗಳು ನಡೆದವೆಂದೂ ಐತಿಹ್ಯಗಳು ತಿಳಿಸುತ್ತವೆ.

ತ್ಯಾಗರಾಜರಿಗೆ ಪ್ರಾಪಂಚಿಕ ವಿಷಯಗಳಲ್ಲಿ ವ್ಯಾಮೋಹವೇ ಇರಲಿಲ್ಲ. ಪತ್ನಿಯ ವಿಯೋಗವೂ ಉಂಟಾಯಿತು. ರಾಮಚಂದ್ರನ ಭಜನೆ, ಕೀರ್ತನೆಗಳಿಗೇ ತ್ಯಾಗರಾಜರ ವೇಳೆಯೆಲ್ಲಾ ಮೀಸಲಾಗಿದ್ದಿತು. ಅವರಿಗೆ ಕೊನೆಯವರೆಗೂ ದೇಹಾರೋಗ್ಯ ಚೆನ್ನಾಗಿತ್ತು. ಅವರಿಗೆ ಸ್ವಪ್ನದಲ್ಲಿ ರಾಮಚಂದ್ರನು ಕಾಣಿಸಿಕೊಂಡು "ಇನ್ನು ಹತ್ತು ದಿನಗಳಿಗೆ ನನ್ನಲ್ಲಿಗೆ ಬಾ" ಎಂದಂತಾಯಿತು. ಸ್ವಪ್ನದಿಂದ ಎಚ್ಚೆತ್ತ ಮೇಲೆ ತಮ್ಮ ಶಿಷ್ಯರಿಗೆ ಈ ವಿಚಾರವನ್ನು ತಿಳಿಸಿ, ಏಕಾದಶಿಯ ದಿನದಂದು ಸನ್ಯಾಸವನ್ನು ಸ್ವೀಕಾರ ಮಾಡಿ 'ನಾದ ಬ್ರಹ್ಮಾನಂದ'ರಾದರು.

ಮಹಾಸಮಾಧಿಯ ದಿನ. ಶಿಷ್ಯರೆಲ್ಲರೂ ಅಖಂಡ ಭಜನೆ ಮಾಡುತ್ತಿದ್ದಾಗ ತ್ಯಾಗರಾಜರ ಜೀವ ಜ್ಯೋತಿ ಶ್ರೀರಾಮನಲ್ಲಿ ಐಕ್ಯವಾಯಿತು. ಮೊದಲೇ ಅವರು ಸೂಚಿಸಿದ್ದಂತೆ, ಅವರ ಗುರುಗಳ ಸಮಾಧಿಯ ಪಕ್ಕದಲ್ಲಿಯೇ ಸಮಾಧಿ ಮಾಡಲಾಯಿತು. 1847 ರಲ್ಲಿ ತ್ಯಾಗರಾಜರು ನಮ್ಮನ್ನಗಲಿದರು.

ಪ್ರಾಮಾಣಿಕತೆ, ಮಾನವೀಯತೆ ನಮ್ರತೆ ಇವೆಲ್ಲಾ ತ್ಯಾಗರಾಜರ ಹುಟ್ಟುಗುಣಗಳಾಗಿದ್ದವು. ಭಗವಂತನ ಕೃಪೆಗಾಗಿ ಅನನ್ಯವಾಗಿ ಮೊರೆಯಿಟ್ಟರು ಅವರು. ರಾಮಚಂದ್ರನ ದರ್ಶನವನ್ನು ಪಡೆದ ಭಾಗ್ಯಶಾಲಿಗಳು. ಅವರ ಬಾಳುವೆಯೂ, ಕೃತಿಗಳೂ ಎಂದೆಂದಿಗೂ ಮಾನವರಿಗೆ ಕೈದೀವಿಗೆಗಳಾಗಿವೆ.

( 35ನೇ ಪುಟ ನೋಡಿ )

# ಶ್ರೀ ವಾದಿರಾಜರು

ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪುರ ತಾಲ್ಲೂಕಿನ ಕುಂಭಾಸಿಯ ಬಳಿ ಹೂವಿನಕೆರೆ ಎಂಬ ಒಂದು ಗ್ರಾಮ. ಅಲ್ಲಿ ತುಳು ಬ್ರಾಹ್ಮಣರಾದ ಶಿವಳ್ಳಿ ರಾಮಾಚಾರ್ಯ ಮತ್ತು ಸರಸ್ವತಿ ಎಂಬ ದಂಪತಿಗಳಿದ್ದರು ಮಕ್ಕಳಿಲ್ಲದ ಅವರಿಗೆ ವಾಗೀಶ ತೀರ್ಥರ ಅನುಗ್ರಹದಿಂದ ಇಬ್ಬರು ಗಂಡು ಮಕ್ಕಳಾದರು ಮೊದಲನೆಯವನಾದ ವರಾಹನನ್ನು ಆ ಮೊದಲೇ ಮಾತುಕತೆಯಾಗಿದ್ದಂತೆ ಅವರು ವಾಗೀಶ ತೀರ್ಥರಿಗೆ ಒಪ್ಪಿಸಿ ಕೃತಾರ್ಥರಾದರು ಬಾಲಕ ವರಾಹನಿಗೆ ಎಂಟು ವರ್ಷಗಳಾಗುತ್ತಲೇ ವಾಗೀಶ ತೀರ್ಥರು ಸಂನ್ಯಾಸ ದೀಕ್ಷೆಯನ್ನು ಕೊಟ್ಟು ವಾದಿರಾಜ ತೀರ್ಥರೆಂಬ ಆಶ್ರಮನಾಮವನ್ನಿತ್ತು ತಮ್ಮ ಹಿರಿಯ ಶಿಷ್ಯರಾದ ವಿದ್ಯಾನಿಧಿತೀರ್ಥರಲ್ಲಿ ವಿದ್ಯಾಭ್ಯಾಸಕ್ಕಾಗಿ ಬಿಟ್ಟರು ವಾದಿರಾಜರು ಸ್ವಲ್ಪ ಕಾಲ ಅಲ್ಲಿ ವಿದ್ಯಾಭ್ಯಾಸ ಮಾಡಿದರು. ವಿದ್ಯಾನಿಧಿತೀರ್ಥರು ಹೆಚ್ಚುಕಾಲ ಬದುಕಲಿಲ್ಲವಾದ್ದರಿಂದ ಮುಂದೆ ಶಿಕ್ಷಣವನ್ನು ವಾಗೀಶ ತೀರ್ಥರಲ್ಲೇ ಮುಂದುವರಿಸಿದರು. ವಿಜಯನಗರದಲ್ಲಿ ರಾಜಗುರುಗಳೆಂದು ಮನ್ನಣೆ ಪಡೆದಿದ್ದ ವ್ಯಾಸರಾಯರಲ್ಲಿ ಅವರು ಕೆಲವು ಕಾಲ ಇದ್ದು ವಿದ್ಯಾರ್ಜನೆ ಮಾಡಿದಂತೆ ತಿಳಿದು ಬರುತ್ತದೆ "ಧರೆಯೊಳು ವಿಜಯೀಂದ್ರ ವಾದಿರಾಜರೆಂಬ ಪರಮ ಶಿಷ್ಯರ ಪಡೆದು ಮೆರೆದರು ಕೀತಿಯಲ್ಲಿ" ಎಂಬ, ವ್ಯಾಸರಾಯರನ್ನು ಕುರಿತ ಪುರಂದರದಾಸರ ಮಾತಿನಲ್ಲಿ ಇದನ್ನು ಕಾಣಬಹುದು. ಸ್ವತಃ ವಾದಿರಾಜರೇ ವ್ಯಾಸರಾಯರನ್ನು "ಗುರುವ್ಯಾಸ ಮುನಿ" ಎಂದು ಸಂಬೋಧಿಸಿರುವುದನ್ನು ಅವರ ಕೀರ್ತನೆಯೊಂದರಲ್ಲಿ ಕಾಣುತ್ತೇವೆ. ವಿಜಯದಾಸರು, ತಿಮ್ಮಣ್ಣದಾಸರು, ಶ್ರೀದವಿಠಲರು — ಇವರ ಕೀರ್ತನೆಗಳೂ ಇದಕ್ಕೆ ಆಧಾರವನ್ನೊದಗಿಸುತ್ತವೆ

ವಾದಿರಾಜರಿಗೆ ಸಂಬಂಧಿಸಿದಂತೆ ಕ್ರಿ. ಶ. 1571, 82, 93ರ ಶಾಸನಗಳು ದೊರಕುವುದರಿಂದ ಅವರು 16ನೆಯ ಶತಕದಲ್ಲಿ ಬಾಳಿ ಬದುಕಿದರೆಂಬುದೂ ಸ್ಪಷ್ಟವಾಗುತ್ತದೆ. ವಾಗೀಶ ತೀರ್ಥರ ತರುವಾಯ ವಾದಿರಾಜತೀರ್ಥರೇ ಅವರ ಮಠದ ಉತ್ತರಾಧಿಕಾರಿಗಳಾದರು. ಹೀಗೆ, ಮಧ್ವಾಚಾರ್ಯರ ತಮ್ಮಂದಿರಾದ ವಿಷ್ಣುತೀರ್ಥರು ಮೂಲ ಪುರುಷರಾಗಿದ್ದಂತಹ ಸೋದೆ ಮಠದ ಪೀಠಿಗೆಯಲ್ಲಿ ಹದಿನೆಂಟನೆಯವರಾಗಿ ಅವರು ಆ ಸಂಸ್ಥಾನವನ್ನು ವಹಿಸಿಕೊಂಡರು.

ವಿದ್ಯಾಸಂಪನ್ನರಾದ ಬಳಿಕ ವಾದಿರಾಜರು ಭರತಖಂಡದ ವಿವಿಧ ತೀರ್ಥಕ್ಷೇತ್ರಗಳ ಸಂದರ್ಶನಾರ್ಥವಾಗಿ ಹೊರಟು, ಉದ್ದಕ್ಕೂ ಧರ್ಮ ಪ್ರಚಾರ ಕಾರ್ಯದೊಂದಿಗೆ, ತಾವು ಸಂದರ್ಶಿಸಿದ ಪುಣ್ಯ ಕ್ಷೇತ್ರಗಳು, ಆಯಾ ಕ್ಷೇತ್ರ ಮೂರ್ತಿಗಳು — ಇವುಗಳ ಮಹಿಮೆಗಳನ್ನು ತಮ್ಮ 'ತೀರ್ಥಪ್ರಬಂಧ'ವೆಂಬ ಸಂಸ್ಕೃತ ಗ್ರಂಥದಲ್ಲಿ ಕ್ರೋಢೀಕರಿಸಿರುವರು. ಶ್ರೀವೇದವ್ಯಾಸರಿಂದ ವಿರಚಿತವಾದ ಶ್ರೀಮನ್ಮಹಾಭಾರತದಲ್ಲಿನ ಒಂದು ಲಕ್ಷ ಕಠಿಣ ಶಬ್ದಗಳಿಗೆ ಬದರೀ ಕ್ಷೇತ್ರದಲ್ಲಿ ವಿವರಣೆಯನ್ನೂ ಬರೆದು 'ಲಕ್ಷಾಲಂಕಾರ'ವೆಂದು ಹೆಸರಿಟ್ಟು ವೇದವ್ಯಾಸರಿಗೆ ಸಮರ್ಪಿಸಿದರು. ತಮಗೆ ಪುತ್ರೋತ್ಸವವಾದರೆ ವೇದವ್ಯಾಸರಿಗೆ ಲಕ್ಷಾಭರಣಗಳನ್ನು ಮಾಡಿಸುವೆನೆಂದು ಅವರ ತಾಯಿ ಹೊತ್ತಿದ್ದ ಹರಕೆಯನ್ನು ಈ ಮೂಲಕ ಸಲ್ಲಿಸಿದ ಸುಪುತ್ರರಿವರು.

ಹೀಗೆ, ದಕ್ಷಿಣ ಕನ್ನಡದ ಕರಾವಳಿಯಿಂದ ಉತ್ತರದ ಬದರಿಯವರೆಗೂ ವಾದಿರಾಜರ ದಿಗ್ವಿಜಯ ಯಾತ್ರೆ ಸಾಗಿತು ತಿರುಪತಿ ಕ್ಷೇತ್ರಕ್ಕೆ ಬಂದಾಗ ಆ ಇಡಿ ಬೆಟ್ಟವೇ ವಾದಿರಾಜರ ಕಣ್ಣಿಗೆ ಸುಂದರ ಸಾಲಿಗ್ರಾಮ ಶಿಲೆಯಾಗಿ ಕಂಡಿತಂತೆ. ಅಂತಹ ಪವಿತ್ರ ಶಿಲೆಗೆ ಪಾದವನ್ನು ಸೋಕಿಸಲೂ ಇಷ್ಟಪಡದೆ ಅವರು ತಮ್ಮ ಮಂಡಿಗಳನ್ನೂರಿ ಬೆಟ್ಟವನ್ನು ಹತ್ತಿ, ಸ್ವಾಮಿಯ ದರ್ಶನವನ್ನೂ ಪಡೆದು, ಶ್ರೀನಿವಾಸನಿಗೆ ಸಾಲಿಗ್ರಾಮದ ಮಾಲೆಯನ್ನು ಸಮರ್ಪಿಸಿದರಂತೆ. ಶ್ರೀನಿವಾಸ ದೇವರ ಸ್ವರ್ಣಪ್ರತಿಮೆಯನ್ನು ಕೊಡುವ ಮೂಲಕ ದೇವಾಲಯದ ಅಧಿಕಾರಿಗಳೂ ವಾದಿರಾಜರನ್ನು ಗೌರವಿಸಿದರೆಂದು ತಿಳಿದು ಬರುತ್ತದೆ ಹೋದೆಡೆಯಲ್ಲೆಲ್ಲ ವಾದಿಸಿ ತಮ್ಮ ಮತ ತತ್ತ್ವಗಳನ್ನು ಸ್ಥಾಪಿಸಿದರೆಂದು ತೋರುತ್ತದೆ. ಅವರ 'ಪಾಷಂಡ ಮತಖಂಡನಂ' ಎಂಬ ಕೃತಿ ಬೌದ್ಧ ಹಾಗೂ ಜೈನಮತ ತತ್ತ್ವಗಳ ಖಂಡನೆಯೇ ಆಗಿದೆ. ವಾದಿರಾಜರು ಪುಣೆಯಲ್ಲಿ ತಂಗಿದ್ದಾಗಿ



ಮಾಘನ 'ಶಿಶುಪಾಲವಧೆ'ಯನ್ನು ಮೀರಿಸುವ ಉದ್ದೇಶದಿಂದ 'ರುಕ್ಮಿಣೀಶ ವಿಜಯ' ವೆಂಬ ಕಾವ್ಯವನ್ನು ಬರೆದಿರಬಹುದೆಂಬ ಅಭಿಪ್ರಾಯವಿದೆ. ವಿವಿಧ ಕ್ಷೇತ್ರಗಳ, ಕ್ಷೇತ್ರಮೂರ್ತಿಗಳ, ತೀರ್ಥಗಳ ಬಗ್ಗೆ ವಾದಿರಾಜರಿಗಿರುವ ಭಕ್ತಿಭಾವ ಅವರ ಕನ್ನಡ ಕೀರ್ತನೆಗಳಲ್ಲಿ ಹೊನಲಿಟ್ಟಿದೆ 'ಗೋದೆ ನಮಸ್ತ

ಡಾ॥ ಟಿ. ಎನ್. ನಾಗರತ್ನ

ಫಲದೆ'. ಎಂದು ಗೋದಾವರಿಯನ್ನು ಒಂದೆಡೆ ಸ್ತುತಿಸುತ್ತಾರೆ 'ನೆನೆವೆನನುದಿನ ನೀಲನೀರದ ವರ್ಣನ' ... ಎಂದು ಉಡುಪಿಯ ಕೃಷ್ಣನನ್ನು ಮತ್ತೊಂದೆಡೆ ಮನಸಾರೆ ಬಣ್ಣಿಸಿದ್ದಾರೆ. 'ಬೇಗ ಬಾರೊ ಬೇಗಬಾರೋ'.. ಎಂದು ಬೇಲೂರಿನ ಚೆನ್ನಕೇಶವನನ್ನು ತಮ್ಮ ಅಂತರಂಗಕ್ಕೆ ಆಹ್ವಾನಿಸಿದಾಗ ಅಲ್ಲಿಯೇ ವಾಸವಾಗಿದ್ದ ವೈಕುಂಠ ದಾಸರೆಂಬ ಅಪರೋಕ್ಷ ಜ್ಞಾನಿಗಳು ಓಡಿಬಂದು

ಶ್ರೀ ವಾದಿರಾಜರು ಸಂಸ್ಕೃತ ಕನ್ನಡ ಸಾಹಿತ್ಯದಲ್ಲಿ ಹೆಸರಾಂತವರು. ಕೀರ್ತನ ಕ್ಷೇತ್ರದಲ್ಲಿ ಹಿರಿಯರು. ಪೀಠಾಧಿಪತಿಗಳಾಗಿ ಧಾರ್ಮಿಕ ಜಗತ್ತಿನಲ್ಲಿಯೂ ಅಧಿಕಾರವಾಣಿ ಅವರದು. ಹೀಗೆ ದಾಸಕೂಟ ವ್ಯಾಸಕೂಟಗಳೆರಡರಲ್ಲೂ ಹಿರಿಯರಾದ ವಾದಿರಾಜರ ಆರಾಧನೆ ಮಾರ್ಚ್ ತಿಂಗಳಿನಲ್ಲಿ. ಶ್ರೀ ವಾದಿರಾಜರ ಈ ಲೇಖನವನ್ನು ತಿ. ತಿ. ದೇ ದಾಸಸಾಹಿತ್ಯದಲ್ಲಿ ಪ್ರಕಟವಾಗುವ ಶ್ರೀನಿವಾಸನ ಹಾಡುಗಳು ಪುಸ್ತಕದಿಂದ ಉದ್ಧರಿಸಲಾಗಿದೆ.

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | | ಶುಕ್ರವಾರಗಳಲ್ಲಿ | |
|---|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ | ಪ್ರಾ 7–30 | ಪ್ರಾ 8–30 |
| | | | ಸಮರ್ಪಣ | ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ | | | | | |
| 2ನೇ ಗಂಟೆ | ಪ್ರಾ 10–00 | ಪ್ರಾ 10–30 | | ಪ್ರಾ 9–30 | ಪ್ರಾ 10–30 |
| *ಆರ್ಜಿತ ಕಲ್ಯಾಣೋತ್ಸವ | ಪ್ರಾ 10–30 | ಮ 12–00 | | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ | | | | | |
| ರಾತ್ರಿ ಗಂಟೆ | ಸಂ 6–30 | ರಾ 7–00 | | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | | ರಾ 8–45 | ರಾ 9–00 |

| | |
|---|---|
| *ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ವರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

ವಾದಿರಾಜರ ಕಾಲಿಗೆ ಬಿದ್ದರಂತೆ. 'ಸಾರಿದೆನೋ ನಿನ್ನ ವೆಂಕಟರನ್ನ' ... ಎಂದು ಆ ಶೇಷಾಚಲವಾಸನ ಮುಂದೆ ತಮ್ಮ ಅಂತರಂಗವನ್ನು ತೋಡಿಕೊಂಡಿದ್ದಾರೆ. "ಶೇಜಿಯೇರಿ ಮೆರೆದು ಬಂದ" ಶ್ರೀರಂಗದ ರಂಗನಾಥನ ವೈಭವವನ್ನು ಮತ್ತೊಂದೆಡೆ ವಿಧವಿಧವಾಗಿ ಚಿತ್ರಿಸಿದ್ದಾರೆ. ಮಂಜುಗುಣಿಯಾದ ವೆಂಕಟೇಶನನ್ನು ಸ್ತುತಿಸಿದಂತೆಯೇ ಶ್ರೀಮುಷ್ಣದ ವರಾಹದೇವರನ್ನೂ ಸ್ತುತಿಸಿದ್ದಾರೆ, ಪ್ರಯಾಗದ ವೇಣೀಮಾಧವನನ್ನೂ ಸ್ತೋತ್ರ ಮಾಡಿದ್ದಾರೆ.

ಗುರುಗಳಾದ ವಾಗೀಶತೀರ್ಥರು ಬೃಂದಾವನಸ್ಥರಾದ ಬಳಿಕ ವಾದಿರಾಜರ ಕಾರ್ಯಕ್ಷೇತ್ರ ವಿಸ್ತರಿಸಿತು. ತಮ್ಮ ಪೂರ್ವಾಶ್ರಮದ ತಮ್ಮಂದಿರಿಗೂ ದೀಕ್ಷೆಯನ್ನಿತ್ತು 'ಸುರೋತ್ತಮತೀರ್ಥ'ರೆಂಬ ಆಶ್ರಮ ನಾಮವನ್ನಿತ್ತರು. ತಮ್ಮ ಉತ್ತರಾಧಿಕಾರಿಗಳೆಂದು ವೇದವೇದ್ಯರನ್ನು ತಯಾರುಮಾಡಿದರು

ಹಯಗ್ರೀವ ವಾದಿರಾಜರ ಇಷ್ಟದೈವ. ಮಠದ ಪರಂಪರೆಯಿಂದ ಬಂದ ಶ್ರೀ ಭೂವರಾಹ ದೇವರೊಂದಿಗೆ ಹಯಗ್ರೀವಮೂರ್ತಿಯನ್ನು ಪೂಜಿಸುತ್ತಿದ್ದರು. ಪ್ರತಿದಿನವೂ ಈ ದೇವರಿಗೆ 'ಮಡ್ಡಿ' ನೈವೇದ್ಯವನ್ನು ಸಮರ್ಪಿಸಿ ಆತನು ತಿಂದು ಬಿಟ್ಟುದನ್ನು ಪ್ರಸಾದವೆಂದು ಸ್ವೀಕರಿಸುತ್ತಿದ್ದರಂತೆ. ವಾದಿರಾಜರ ಕೃತಿಗಳಲ್ಲಿ ಅಶ್ವಧಾಟಿಯ ದಶಾವತಾರಸ್ತುತಿಯನ್ನೂ, 'ಕುದುರೆ ಬಂದಿದೆ ಚೆಲ್ವ ಕುದುರೆ ಬಂದಿದೆ', 'ಆವ ಕಡೆಯಿಂದ ಬಂದೆ ವಾಜಿವದನನೆ' ಮೊದಲಾದ ಕೀರ್ತನೆಗಳನ್ನೂ ಅಭ್ಯಸಿಸಿದರೆ ವಾದಿರಾಜರ ಹಯಗ್ರೀವಮೂರ್ತಿಯು ಪ್ರತ್ಯಕ್ಷ ದರ್ಶನವನ್ನು ಪಡೆಯಬಹುದು. ಅವರು 'ಹಯವದನ' ಎಂಬ ಅಂಕಿತದಿಂದಲೇ ಕನ್ನಡದಲ್ಲಿ ದೇವರ ಸ್ತುತಿಪದ್ಯಗಳನ್ನು, ನೂರಾರು ಸಂಖೆಯಲ್ಲಿ ರಚಿಸಿದ್ದಾರೆ.

ವಾದಿರಾಜರ ಬಗೆಗಿರುವ ಪರಂಪರಾಗತ ಅಭಿಪ್ರಾಯಗಳನ್ನು ಅವಲೋಕಿಸಿದಾಗ ಅವರು ಮತೀಯ ವಿಷಯಗಳಲ್ಲಿ ಉದಾರಿಗಳು ಎಂಬ ಅಂಶ ಗಮನಕ್ಕೆ ಬರುತ್ತದೆ. ದಕ್ಷಿಣಕನ್ನಡ ಜಿಲ್ಲೆಯ ಕೋಟೇಶ್ವರದ ಬ್ರಾಹ್ಮಣರು, ಮಟ್ಟಿಯ ಬ್ರಾಹ್ಮಣರು, ಚಿನಿವಾರರೇ ಮೊದಲಾದವರಿಗೆ ಮುದ್ರಾಧಾರಣೆ ಮಾಡಿಸಿ ತಮ್ಮ ಶಿಷ್ಯರನ್ನಾಗಿ ಸ್ವೀಕರಿಸಿರುವರು. ಆ ಮೂಲಕ ಮಠದ ಸಂಪತ್ತನ್ನು ಬೆಳೆಸುವುದರೊಂದಿಗೆ ತಮ್ಮ ಹೃದಯ ವೈಶಾಲ್ಯವನ್ನೂ ಮೆರೆದಿರುವರು. ಜನಸಾಮಾನ್ಯರಿಗಾಗಿ ತುಳುವಿನಲ್ಲಿ ಪಾಡ್ದನಗಳನ್ನೂ ದಶಾವತಾರ ಸ್ತುತಿಯನ್ನೂ ರಚಿಸಿರುವುದು ಗಮನಾರ್ಹ ಸಂಗತಿ. ಅಂತೆಯೇ ವಾದಿರಾಜರ

ಸಮಕಾಲೀನರಾದ ರಾಜರು, ಸಾಮಂತರು ಅವರನ್ನು ಗೌರವಿಸಿದ್ದಾರೆ. ವಿಜಯನಗರದ ಶ್ರೀ ವೆಂಕಟರಾಯನು ಅವರಿಗೆ 'ಪ್ರಸಂಗಾಭರಣ ತೀರ್ಥ'ರೆಂಬ ಬಿರುದನ್ನು ಕೊಟ್ಟನೆಂಬ ಮಾತಿದೆ. ತಮ್ಮ ವಿಶೇಷವಾದ ವರ್ಚಸ್ಸಿನಿಂದ; ಅಪ್ರತಿಮ ಪಾಂಡಿತ್ಯದಿಂದ ಅವರು ಮಧ್ವಮತಾನುಯಾಯಿಗಳಿಂದ ಉಡುಪಿಯ ಅಷ್ಟಮಠಗಳಿಗೆ ಅನೇಕ ಸವಲತ್ತುಗಳನ್ನು ಸಂಪಾದಿಸಿದರು. ಅವರು ಪರ್ಯಾಯ ಪೀಠದಲ್ಲಿದ್ದಾಗ ವಿಜಯನಗರದ ಅಚ್ಯುತರಾಯನು ಉಡುಪಿಯನ್ನು ಸಂದರ್ಶಿಸಿ ಅಲ್ಲಿಯ ಕೃಷ್ಣಮಠದ ಮುಂದಿನ ಸರೋವರವನ್ನು ಜೀರ್ಣೋದ್ಧಾರ ಮಾಡಿಸಿದನೆಂಬ ಮಾತಿದೆ. ಕೋಟೇಶ್ವರದ ಬ್ರಾಹ್ಮಣರಿಂದ 'ಪ್ರಕಾಂಡ ಮಾಧ್ವಮುನಿ' ಎಂದು ಕರೆಸಿಕೊಂಡ ವಾದಿರಾಜರು ಜೈನರು, ಅದ್ವೈತಿಗಳು ಮತ್ತು ಶೈವರೊಡನೆ ವಾಗ್ಯುದ್ಧ ಮಾಡಿ ತಮ್ಮ ಮಧ್ವ ಮತವನ್ನು ಸ್ಥಾಪಿಸಬೇಕಾಯಿತು. ಕೆಳದಿಯ ಪಾಳೆಯಗಾರರಾಗಿದ್ದ ಸದಾಶಿವನಾಯಕ, ದೊಡ್ಡಸಂಕಣ್ಣ ನಾಯಕ ಮತ್ತು ಸೋದೆಯ ಅರಸಪ್ಪನಾಯಕರು ವಾದಿರಾಜರ ಸಮಕಾಲೀನರು. ಶೈವಮತಾನುಯಾಯಿಗಳಾಗಿದ್ದ ಅವರುಗಳು ವಾದಿರಾಜರಿಂದ ಪ್ರಭಾವಿತರಾದುದಕ್ಕೆ, ಶೈವರ ಪ್ರಾಬಲ್ಯವಿದ್ದ ಸೋದೆಯನ್ನು ಅರಸಪ್ಪನಾಯಕನೂ, ಮುಂದೆ ಸು. 1614ರಲ್ಲಿ ವಾದಿರಾಜರ ಶಿಷ್ಯರಾದ ವೇದವೇದ್ಯರಕಾಲದಲ್ಲಿ ಹೂವಿನ ಕೆರೆಯನ್ನು ಕೆಳದಿ ವೆಂಕಟಪ್ಪನಾಯಕನೂ ಈ ಮಠಕ್ಕೆ ಧಾರೆಯೆರೆದು ಕೊಟ್ಟದ್ದೇ ಸಾಕ್ಷಿ. ವೀರಶೈವ ಪಂಡಿತನಾಗಿದ್ದ ಅಪ್ಪಯ್ಯ ದೀಕ್ಷಿತನೆಂಬುವವನನ್ನು ವಾದದಲ್ಲಿ ಸೋಲಿಸಿದ ಕೀರ್ತಿ ವಾದಿರಾಜರದು.

ಉಡುಪಿಯ ಕೃಷ್ಣಮಠವನ್ನು ವಿಶಾಲವಾಗಿ ಕಟ್ಟಿಸಿ, ಅದರ ಆಸುಪಾಸಿನಲ್ಲಿ ಅಷ್ಟಮಠಗಳನ್ನೂ ಕಟ್ಟಿಸಿದವರು ವಾದಿರಾಜರು. ಕೃಷ್ಣಮಠದ ಎದುರಿನಲ್ಲಿ ಅನಂತೇಶ್ವರ ಮತ್ತು ಚಂದ್ರಮೌಳೀಶ್ವರ ದೇವಾಲಯಗಳನ್ನು ಕಟ್ಟಿಸಿದರು. ಪರ್ಯಾಯ ಪದ್ಧತಿಯನ್ನು ವ್ಯವಸ್ಥೆಗೊಳಿಸಿದವರು ವಾದಿರಾಜರೇ. ಅವರಿಗೆ ನಡೆದುಕೊಂಡು ಬಂದಿದ್ದಂತಹ ಎರಡುತಿಂಗಳ ಪೂಜಾಕಾಲವನ್ನು ಎರಡು ವರ್ಷಗಳಿಗೇರಿಸಿದರು. ಎಂಟುಮಂದಿ ಯತಿಗಳಿಗೆ ಒಬ್ಬೊಬ್ಬರ ಪರ್ಯಾಯಸರದಿ ಬರುವುದಕ್ಕೂ ಹದಿನಾಲ್ಕು ವರ್ಷಗಳ ಕಾಲಾವಕಾಶವಿರುತ್ತಿತ್ತು. ಆ ಕಾಲದಲ್ಲಿ ಅವರು ದೇಶಸಂಚಾರ ಹೊರಟು ಶಿಷ್ಯಾರ್ಜನೆ, ದ್ರವ್ಯಾರ್ಜನೆಗಳನ್ನು ಮಾಡಬಹುದಾಯಿತು. ಪ್ರತಿ ಮಠದಲ್ಲೂ ಭಾಗವತರ ಭಜನಪದ್ಧತಿಯನ್ನು ಆಚರಣೆಗೆ ತಂದರು. ಪ್ರತಿರಾತ್ರಿ ಪೂಜಾನಂತರ ಭಕ್ತರೊಡನೆ ಯತಿಗಳೂ ಕಲೆತು ಭಜನೆಮಾಡುವ ಕ್ರಮ ರೂಢಿಗೆ ಬಂತು. ಆ ಮೂಲಕ ಶ್ರೀಪಾದರಾಜರ ಮಠ, ವ್ಯಾಸರಾಯರ ಮಠಗಳಲ್ಲಿದ್ದಂತೆ ಉಳಿದ ಮಠಗಳಲ್ಲೂ ದೇವರ ಸೇವೆಗೆ ಕನ್ನಡ ಕೀರ್ತನೆಗಳು ಮೀಸಲಾದುವು. ಉಡುಪಿಯ ಅಷ್ಟಮಠಗಳಲ್ಲಿ ಈ ವ್ಯವಸ್ಥೆ ಇಂದಿಗೂ ಪ್ರಚಲಿತವಿದೆ.

ವಾದಿರಾಜರು ಉತ್ತರದ ಬದರಿಯಲ್ಲಿದ್ದ ತ್ರಿವಿಕ್ರಮನ ಮೂರ್ತಿಯನ್ನು ದಕ್ಷಿಣದ ಸೋದೆಯಲ್ಲಿ ಪ್ರತಿಷ್ಠಾಪಿಸಿದ್ದು; ಅಯೋಧ್ಯೆಯ ಗರುಡ ಮಾರುತೀ ವಿಗ್ರಹಗಳನ್ನು ಉಡುಪಿಯ ಕೃಷ್ಣನ ಸನ್ನಿಧಿಗೆ ಕರೆತಂದಿದ್ದು; ಕದರಿಯ ದೇವಾಲಯದ ಮಂಜುನಾಥದೇವರನ್ನು ಧರ್ಮಸ್ಥಳದಲ್ಲಿ ಪ್ರತಿಷ್ಠಾಪಿಸಿದ್ದು; ಪುಂಡೀಬೈಲಿನಲ್ಲಿ ದಂಡ ತೀರ್ಥವನ್ನು ಹರಿಸಿದರೆನ್ನುವುದು ಜನಸಾಮಾನ್ಯರಿಗೆ ಪವಾಡ ಸದೃಶವಾಗಿ ಕಂಡಿದ್ದಲ್ಲಿ ಆಶ್ಚರ್ಯವೇನಲ್ಲ. ಆ ಕಾಲದ ಮೂಡಬಿದರೆಯಲ್ಲಿದ್ದ ಜೈನ ಮಹಾರಾಜನು ತನ್ನ ಜ್ಞಾಪಕಾರ್ಥವಾಗಿ ವಾದಿರಾಜರಿಗೆ ಸಮರ್ಪಿಸಿದ್ದನ್ನಲಾದ ಒಂದು ಪಚ್ಚೆಯ ವಿಠಲ ಮೂರ್ತಿ ಈಗಲೂ ಸೋದೆಮಠದಲ್ಲಿದೆ. ಹೀಗೆ ಸತತವಾಗಿ ಮತಪ್ರಚಾರ ಕಾರ್ಯ, ಧಾರ್ಮಿಕ, ಸಾಮಾಜಿಕ ಕರ್ತವ್ಯಗಳನ್ನು ನಿರ್ವಹಿಸಿದ ವಾದಿರಾಜರು ಸೋದೆ ಕ್ಷೇತ್ರಕ್ಕೆ ಬಂದರು. ಅವರ ಆಗಮನಕ್ಕೆ ಮುಂಚೆ ಅದು ಒಂದು ಅರಣ್ಯ ಪ್ರದೇಶವಾಗಿತ್ತು. ಧವಳ ಗಂಗೆಯೇ ಮೊದಲಾದ ಪಂಚತೀರ್ಥಗಳ ನಿರ್ಮಾಣ, ತ್ರಿವಿಕ್ರಮ, ವೇಣುಗೋಪಾಲ, ಲಕ್ಷ್ಮೀದೇವಿಯರ ಸ್ಥಾಪನೆಗಳಿಂದ ಅದನ್ನು ಅವರು ಒಂದು ಪವಿತ್ರ ತೀರ್ಥಕ್ಷೇತ್ರವನ್ನಾಗಿ ಪರಿವರ್ತಿಸಿದರು. ವಾದಿರಾಜರು ತಮ್ಮ ತಪಸ್ಸಿನ ಶಕ್ತಿಯಿಂದ ನಾರಾಯಣಭೂತನನ್ನು ಒಲಿಸಿಕೊಂಡಿದ್ದರೆಂದು ಹೇಳಲಾಗುತ್ತದೆ. ಆ ಕ್ಷೇತ್ರ ರಕ್ಷಕನಾಗಿ ಆ ಭೂತನಿಗೂ ಒಂದು ದೇವಾಲಯವನ್ನು ಕಟ್ಟಲಾಗಿದೆ. ಈಗಲೂ ಆ ಪವಿತ್ರ ಕ್ಷೇತ್ರಕ್ಕೆ ಹೋದವರು ಮೊದಲು ಒಂದು ಇಡಿಗಾಯನ್ನು ಭೂತನಾಥನ ಮುಂದೆ ಉರುಳಿಸಿ ಅನಂತರ ಮುಂದೆ ಹೋಗುವುದು ಕ್ರಮ.

ವಾದಿರಾಜರು ಸೋದೆಯಲ್ಲಿಯೇ ವೃಂದಾವನಸ್ಥರಾಗಲು ಬಯಸಿದರು. ಆದ್ದರಿಂದ ತಮಗಾಗಿ ಒಂದು ವೃಂದಾವನವನ್ನೂ ಅದರ ಸುತ್ತಲೂ ಇತರ ನಾಲ್ಕು ವೃಂದಾವನಗಳನ್ನೂ ಕಟ್ಟಿಸಿ ಅವುಗಳಮೇಲೆ ಬೇರೆ ಬೇರೆ ವಿಗ್ರಹಗಳನ್ನು ಕೊರೆಸಿದರು. ಆ ಹೊತ್ತಿಗೆ ನಾಲ್ಕು ಪರ್ಯಾಯಗಳನ್ನು ನಡೆಸಿದ್ದ ವಾದಿರಾಜರಿಗೆ ತಮ್ಮ ಐದನೆಯ ಪರ್ಯಾಯವನ್ನೂ ನಡೆಸುವ ಸರದಿ ಬಂತು. ಆದರೆ, ಅದನ್ನು ಅವರು ತಮ್ಮ ಚಿಕ್ಕಪಟ್ಟದ ಸ್ವಾಮಿಗಳಾದ ವೇದವೇದ್ಯರಿಗೆ ಬಿಟ್ಟುಕೊಟ್ಟು ಉದಾರತೆಯನ್ನು ಮೆರೆದರು. ತಾವು ಸೋದೆಯಲ್ಲಿಯೇ ಪರ್ಯಾಯವನ್ನು ನಡೆಸಿ, ಸೋದೆಯನ್ನು 'ಕಿರುಉಡುಪಿಯನ್ನಾಗಿ' ಪರಿವರ್ತಿಸಿದರು. ಕೊನೆಗೆ, ತಮ್ಮ ನೂರಿಪ್ಪತ್ತು ವರ್ಷಗಳ ಬಾಳ್ವೆಯನ್ನು ಮುಗಿಸಿ, ಕ್ರಿ.ಶ 1600ರಲ್ಲಿ (ಶಾ. ಶ 1522 ನೆಯ ಶಾರ್ವರಿ ಸಂ. ಫಾಲ್ಗುಣ ಬಹುಳ ತದಿಗೆ) ವಾದಿರಾಜರು ಸಶರೀರಿಗಳಾಗಿ ವೃಂದಾವನವನ್ನು ಪ್ರವೇಶಿಸಿದರೆಂದು ತಿಳಿದು ಬರುತ್ತದೆ. ಅಷ್ಟು ದೀರ್ಘಕಾಲ ಪೀಠಾಧಿಪತ್ಯ ಮಾಡಿದವರು ವಿರಳ. ಅವರ ಅನಂತರ ಸೋದೆಯ ಆ ಸಂಸ್ಥಾನ ಸೋದೆ ವಾದಿರಾಜಮಠವೆಂದೇ ಪ್ರಚಲಿತವಾಯಿತು. ಇದು ಅವರ ಅಂತಃಸ್ಸತ್ವಕ್ಕೆ ಸಾಕ್ಷಿ.

ವಾದಿರಾಜರು ಸು. 60 ಕೃತಿಗಳನ್ನು ರಚಿಸಿದ್ದಾರೆನ್ನಲಾಗಿದೆ. ಅವುಗಳಲ್ಲಿ ಅರ್ಧದಷ್ಟು ಕೇವಲ ಸಣ್ಣಸಣ್ಣ ಸ್ತೋತ್ರಗಳು. ಸುಮಾರು ಇಪ್ಪತ್ತು ಅವರ ಬೃಹತ್ ಕೃತಿಗಳು. ಅವುಗಳಲ್ಲಿ ಹನ್ನೆರಡು ಅವರ ಸ್ವಂತ ಕೃತಿಗಳು. ಉಳಿದವು ಮಧ್ವಶಾಸ್ತ್ರಗ್ರಂಥಗಳ ಟೀಕಾಗ್ರಂಥಗಳು. ಅವುಗಳಲ್ಲಿ ಕೆಲವು ಮಾತ್ರ ಅಚ್ಚಾಗಿವೆ. ಯುಕ್ತಿಮಲ್ಲಿಕಾ, ರುಕ್ಮಿಣೀಶವಿಜಯ, ಪಾಷಂಡಮತ ಖಂಡನ, ತೀರ್ಥಪ್ರಬಂಧ, ಸರಸಭಾರತೀ ವಿಲಾಸ, ಗುರುರಾಜೀಯಸುಧಾಟಿಪ್ಪಣಿ, ತಾತ್ಪರ್ಯನಿರ್ಣಯ ಟೀಕಾ – ಮೊದಲಾದವು ಅವರ ಸಂಸ್ಕೃತಗ್ರಂಥಗಳಲ್ಲಿ ಮುಖ್ಯವಾದುವು. ಕನ್ನಡ ಕೃತಿಗಳಲ್ಲಿ ವೈಕುಂಠವರ್ಣನೆ, ಗುಂಡಕ್ರಿಯಾ, ಕನ್ನಡ ತಾತ್ಪರ್ಯ ನಿರ್ಣಯ, ಭ್ರಮರಗೀತೆ, ಸ್ವಪ್ನಗದ್ಯ ಮೊದಲಾದುವನ್ನು ಹೆಸರಿಸಬಹುದು. ಭಾಗವತ, ಪಾಂಚರಾತ್ರಾಗಮ ಮತ್ತು ಶ್ರುತಿಗಳ ಪ್ರಮಾಣಗಳನ್ನು ಕನ್ನಡೀಕರಿಸಿ ನೂರಾರು ಸಂಖ್ಯೆಯಲ್ಲಿ ಕೀರ್ತನೆಗಳನ್ನು ರಚಿಸಿದ್ದಾರೆ. ಹೀಗೆ ತಮ್ಮ ಗುರುಗಳಾದ ವ್ಯಾಸತೀರ್ಥರಂತೆ ಇವರೂ ವ್ಯಾಸ–ದಾಸಕೂಟಗಳೆರಡರಲ್ಲಿಯೂ ಮುಖ್ಯರಾಗಿರುವರು. 'ಮೊದಲು ತೋರುತದೆ ಮಧುರ ವಿಷಯಸುಖ। ಕಡೆಯಲಿ ದುಃಖ ಅನೇಕ' – ಇದು ಅವರು ಕಂಡ ಜೀವನಾನುಭವ; ಸಂಸಾರದ ಸವಿ. 'ಅಡಿಗಾಧಾರವಿಲ್ಲ ಹಿಡಿವುದಕೆ ಕೊಂಬಿಲ್ಲ' ಇದುಸಂಸಾರ ಸಾಗರದಲ್ಲಿ ಬಿದ್ದಿರುವ ಜೀವನ ಸ್ಥಿತಿ. ಇಂತಹ ಭವದಿಂದ, ಜನನ ಮರಣಗಳ ಚಕ್ರದಿಂದ ಬಿಡುಗಡೆ ಹೊಂದಬೇಕಾದರೆ ಪ್ರತಿದಿನ ಬೆಳಗಿನಜಾವದಿಂದ ರಾತ್ರಿಯವರೆಗೂ ಮಾಡತಕ್ಕ ಕರ್ಮಗಳನ್ನು ಹರಿಪೂಜೆಯೆಂದು ಭಾವಿಸಿ, ಪರಿಶುದ್ಧವಾದ ದೈನಂದಿನ ಚರಿಯವನ್ನಿಟ್ಟುಕೊಳ್ಳುವುದು ಅತ್ಯಗತ್ಯ. ಹಾಗೆ ಹರಿಯನ್ನು ಸೇವಿಸುತ್ತಾ

( 32 ನೇ ಪುಟ ನೋಡಿ )

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ದತ್ತಿಯನ್ನು ನೀಡ ಬಯಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಅರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ;

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟ್ ಅನ್ನು ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗದಿ ಆಗಿರುವ ದತ್ತಿಯ ಮೌಲ್ಯ ರೂ: 3 ಲಕ್ಷ. ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಅರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ
(2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದುಬಾರಿಗೆ 10% ದಂತೆ). ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ
ಸಂಪರ್ಕಿಸಿ

**ಆಡಳಿತ ನಿರ್ವಹಣಾಧಿಕಾರಿ**

**ತಿ. ತಿ. ದೇ. ತಿರುಪತಿ.**

# ದಾಸರ ಹಾಡಿನ ವೆಂಕಟೇಶ

ಶ್ರೀ ಚಿಂಚೋಳಿ ಪ್ರಹ್ಲಾದಾಚಾರ್ಯ

"ವೆಂಕಟಾದ್ರಿ ಸಮಂ ಸ್ಥಾನಂ ಬ್ರಹ್ಮಾಂಡೇ ನಾಸ್ತಿ ಕಿಂಚಿನ। ವೆಂಕಟೇಶ ಸಮೋದೇವೋ ನಭೂತೋ ನಭವಿಷ್ಯತಿ" ಎಂಬ ವಾಕ್ಯ ಅಕ್ಷರಃ ಸತ್ಯವಾದುದು. ಇದು ಒಮ್ಮೆ ವೆಂಕಟಗಿರಿಗೆ ಭಕ್ತಿಯಿಂದ ಯಾತ್ರೆ ಮಾಡಿದವರಿಗೆ ವೇದ್ಯವಾಗುತ್ತದೆ. ತಿರುಪತಿಯ ಪವಿತ್ರ ವಾತಾವರಣ ಅಲ್ಲಿ ಬರುವ ಭಕ್ತರ ಶ್ರದ್ಧೆ ಹಾಗೂ ಶ್ರೀ ಸ್ವಾಮಿಯನ್ನು ದರ್ಶನ ಮಾಡುವ ಕಾತರತೆ, ಇಂತಹ ನವ ನವೀನ ನಾಗರಿಕತೆಯ ಕಾಲದಲ್ಲೂ, ನಾಸ್ತಿಕವಾದ ತಾಂಡವನೃತ್ಯವನ್ನು ಮಾಡುತ್ತಲಿದ್ದರೂ, ಸ್ತ್ರೀಪುರುಷರು ಅಸಂಖ್ಯಾತವಾದ ಸಂಖ್ಯೆಯಲ್ಲಿ ವರ್ಷದ 365 ದಿನವೂ ತಮ್ಮ ಸ್ಥಾನಮಾನಾದಿಗಳನ್ನೇ ಸಂಪೂರ್ಣವಾಗಿ ಮರೆತು ಶ್ರೀವೆಂಕಟೇಶನೊಬ್ಬನನ್ನೇ ಚಿಂತಿಸುತ್ತಾ ತಮ್ಮ ತಲೆಗೂದಲನ್ನು ಕೊಟ್ಟು ಬರುತ್ತಿರುವ ಕ್ರಮವನ್ನು ನೋಡಿದರೆ ಏನೆನ್ನಬೇಕೋ ತಿಳಿಯದಾಗಿದೆ. ಜನಾಂಗ ಮೈಮರೆತು ಹುಚ್ಚರಂತೆ ಅಲ್ಲಿರುವ ಹುಂಡಿಗಳನ್ನೆಲ್ಲಾ ಭರ್ತಿಮಾಡುತ್ತಿರುವ ಅಂಶ ಬಹು ಸೋಜಿಗವೇ ಆಗಿದೆ. ಮೆತ್ತನೆ ಕುರ್ಚಿಯ ಮೇಲೆ ಐದು ನಿಮಿಷ ಕೂಡಲಾರದ ಜನ ಅಲ್ಲಿ ಭಕ್ತಿಯ ಬೋನಿನಲ್ಲಿ ಕೂಡಿಹಾಕಿದಾಗ, ತಾವು ನೋಡುವ ಒಂದು ಗಳಿಗೆ ದರ್ಶನಕ್ಕೆ ಅನೇಕ ಗಂಟೆಗಳೇ ಕಾದಿರುವ ದೃಶ್ಯ ಖಂಡಿತ ಒಂದು ತಪಸ್ಸೆಂದು ನನ್ನ ಭಾವನೆ. ದೇವಸ್ಥಾನದ ಆಡಳಿತ ವರ್ಗದವರಿಗೆ ಬರುವ ಯಾತ್ರಿಕರ ಯೋಗಕ್ಷೇಮ ನೋಡಿಕೊಳ್ಳುವುದು, ವಸತಿಗಳನ್ನು ಒದಗಿಸುವುದು, ದೇವರ ದರ್ಶನ ಮಾಡಿಸುವುದು ಹಾಗೂ ಪ್ರಸಾದಾದಿಗಳ ವಿತರಣೆಯೇ ಇಡೀ ದಿನವೆಲ್ಲಾ ಆಗುತ್ತಿದೆ. ಇಂತಹ ನಮ್ಮ ಸ್ವಾಮಿಯಾದ ಶ್ರೀ ವೆಂಕಟೇಶನ ಮಹಿಮೆ ಅಲ್ಪಜ್ಞರಾದ, ಅನ್ನಗತರಾದ, ಅಹಂಕಾರಿಗಳಾದ, ಕೇವಲ ಉದರ ಪೋಷಣೆಗೇ ಇಡೀ ಆಯಸ್ಸೆಲ್ಲವನ್ನೂ ಕಳೆಯುತ್ತಿರುವ ನಮ್ಮಗಳಿಗೇ ಇಷ್ಟು ಆಶ್ಚರ್ಯಕರವಾಗಿರುವಾಗ, ಆ ಸ್ವಾಮಿಯ ಆಜ್ಞೆ ಪರಿಪಾಲಿಸಲು ಮನುಜ ವೇಷದಿಂದ ಅವತರಿಸಿರುವ ಮಹಾ ಅಪರೋಕ್ಷಜ್ಞಾನಿ ಶ್ರೇಷ್ಠರುಗಳಾದ ನಾರದಾಂಶಸಂಭೂತರಾದ ಪುರಂದರದಾಸರು, ಭೃಗು ಋಷಿಗಳಾದ ವಿಜಯದಾಸರು, ಗಣಪತಿ ಅಂಶದ ಗೋಪಾಲದಾಸರು ಹಾಗೂ ಸಹ್ಲಾದಾಂಶರಾದ ಜಗನ್ನಾಥದಾಸರೇ ಆದಿಯಾದ ಮಹಾನುಭಾವರುಗಳು ಈ ಕ್ಷೇತ್ರಕ್ಕೆ ಆಗಮಿಸಿದಾಗ ಇನ್ನೆಷ್ಟರ ಮಟ್ಟಿನ ಆನಂದಾತಿಶಯಗಳನ್ನು ಪಟ್ಟಿರಬಹುದು ಎಂಬುದೇ ಆಲೋಚನಾತೀತವಾಗಿದೆ! ಕುಶಲ ವಿದ್ಯಾಪಾರಂಗತನೊಬ್ಬ ಮೃದುಜೇನುಮೇಣದಿಂದ ಸುಂದರ ವಿಗ್ರಹವನ್ನು ಮಾಡುವಂತೆ ಈ ದಾಸಚತುಷ್ಟಯ ತಮ್ಮದೇ ಆದ ಅತ್ಯುತ್ತಮ ಭಾಷಾಲಹರಿಯಲ್ಲಿ ಶಾಸ್ತ್ರ ಸಮ್ಮತವಾಗಿ ಸಿದ್ಧಾಂತ ಅವಿರೋಧವಾಗಿ ರಾಗ, ತಾಳ, ಶೃತಿ ಇತ್ಯಾದಿಗಳನುಗುಣವಾಗಿ ಲಕ್ಷಾಂತರ ದೇವರ ನಾಮಗಳು, ಉಗಾಭೋಗಾದಿಗಳು ಹಾಗೂ ಸುಳಾದಿಗಳನ್ನು ಈ ಸುಂದರ ವಿಗ್ರಹನಾದ ಶ್ರೀನಿವಾಸನ ಕುರಿತು ರಚಿಸಿರುವುದು ಗಮನಿಸಬೇಕಾದ ಸಂಗತಿಯೇ ಸರಿ. ಅವುಗಳಲ್ಲಿ ಕೆಲವನ್ನು ಮಾತ್ರ ಉಲ್ಲೇಖಿಸಲು ನಾನು ತವಕಿಸುತ್ತಿದ್ದೇನೆ.

ವಾದಿರಾಜರು ಕಂಡ ಶ್ರೀನಿವಾಸ–

ಉಡುಪಿ ಅಷ್ಟಮಠಗಳಲ್ಲೊಂದಾದ ಸ್ವಾದಿಮಠಕ್ಕೆ ಸೇರಿದ ವಾದಿರಾಜರು ಒಮ್ಮೆ ತಿರುಪತಿಗೆ ಬಂದರು. ಇಡೀ ವೆಂಕಟಗಿರಿ ಅವರಿಗೆ ಸಾಲಿಗ್ರಾಮ ಶಿಲೆಯಾಗಿ ಗೋಚರಿಸಿತು. ಆನಂದಪುಳಕಿತರಾದ ರಾಜರು ಹೀಗೆ ಹೊಗಳುತ್ತಾ ತಮ್ಮ ಮೊಣಕಾಲಿನಿಂದಲೇ ಇಡೀ ಬೆಟ್ಟವನ್ನು ಹತ್ತಿದರೆಂದು ಅವರ ಚರಿತ್ರೆಯಲ್ಲಿದೆ,

ಸಾರಿದೆನೊ ನಿನ್ನ ವೆಂಕಟರನ್ನ ॥ ಪ ॥
ನೀರಜ ನಯನನೆ, ನಿರ್ಮಲ ಗುಣರನ್ನ ॥ ಅ ॥

ಅನಾಥನು ನಾನು, ಎನಗೆ ಬಂಧುವೊ ನೀನು
ನಿನ್ನವನೆಂದು ನೋಡೋ, ನೀನಾಗಿ ದಯಮಾಡೊ ॥ ೧ ॥

ಎನ್ನ ಕುಂದುಗಳನ್ನು ಎಣಿಸಲಾಗದೊ ದೇವ
ಶೇಷಾಚಲವಾಸ

ಹೀಗೆ ನಾನಾ ರೀತಿಯಲ್ಲಿ ಶ್ರೀಪಾದರಾಜರು ವ್ಯಾಸರಾಯರೇ ಇತ್ಯಾದಿ ಮಹಾಮಹಿಮರು ಶ್ರೀನಿವಾಸನನ್ನು ಕೊಂಡಾಡಿರುತ್ತಾರೆ.

ಪುರಂದರದಾಸರು ಕಂಡ ಶ್ರೀನಿವಾಸ–

ನಾರದಾಂಶ ಸಂಭೂತರಾದ ಪುರಂದರ ದಾಸರು ಶ್ರೀನಿವಾಸನನ್ನು ಮೈಮರೆತು



ಕೊಂಡಾಡುತ್ತಾ "ಎಂದು ಕಾಂಬೆನೋ ನಿನ್ನ। ಸ್ವಾಮಿ ಶ್ರೀ ಶೇಷಾಚಲರನ್ನ" ಎಂದು ದೇವರನನ್ನು ನೋಡುವ ತವಕವನ್ನು ವ್ಯಕ್ತಪಡಿಸಿ, "ಅಪ್ಪ ಬಾರೊ, ತಿಮ್ಮಪ್ಪಬಾರೋ, ಕಂದರ್ಪ ಜನಕ, ಕಂಚಿವರದಾ ಬಾರೊ" ಎಂದು ಮಮತೆಯಿಂದ ಕರೆದಿದ್ದಾರೆ.

ಪುರಂದರದಾಸರು ಮುಂದುವರೆದು "ಬಂದು ನಿಂತಿಹನೋಡಿ, ಭೂತಳದಿ ವೆಂಕಟ ಇಂದಿರೆಯ ಒಡಗೂಡಿ,ನಿರಂತರ ಪೊಂದಿಭಜನೆಯ ಮಾಡಿ ಆನಂದಗೂಡಿ" ಎಂದು ಶ್ರೀನಿವಾಸನನು ಭೂವೈಕುಂಠವೆನಿಸಿದ ತಿರುಪತಿಯಲ್ಲಿ, ವಕ್ಷದಲ್ಲಿ ಲಕ್ಷ್ಮೀದೇವಿಯನ್ನು ತೋರಿಸುತ್ತಾ ಆಕೆಯೊಡನೆ ಭಕ್ತರನ್ನನುಗ್ರಹಿಸಲು ಪ್ರಕಟವಾಗಿರುತ್ತಾನೆ ಎಂಬ ನೈಜಶಾಸ್ತ್ರ ಸಮ್ಮತವಾದ ಕ್ರಮದಲ್ಲಿ ಸುಶೈಲಿಯಲ್ಲಿ ಮೂರು ನುಡಿ ದೇವರ ನಾಮದಲ್ಲಿ ವಿವರಿಸುತ್ತಾ, 'ದ್ವಾರದೆಡಬಲದಲ್ಲಿ ಜಯವಿಜಯರಿಬ್ಬರು ಸೇರಿ ಸೇವಿಪರಿಲ್ಲಿ ಶೇಷಾದ್ರಿ ಮಂದಿರದಲ್ಲಿ...". ಆ ಕ್ಷೇತ್ರವೇ ಕಣ್ಣೆದುರಿಗೆ ಬರುವಂತೆ ವಿವರಿಸಿ, ಆ ಸ್ವಾಮಿಯ ದಿವ್ಯರೂಪವನ್ನೂ ಆಭರಣಾದಿಗಳನ್ನೂ "ಪದಕ ಕೌಸ್ತುಭಹಾರ, ಸರಿಗೆಯ ಮಂದರ ಸುದರುಶನ ಸರದಾರ, ಸುಂದರ ಮನೋಹರ' ಎಂದು ವರ್ಣಿಸಿ, ಶ್ರೀನಿವಾಸನೇ ಸರ್ವೋತ್ತಮ ಮೂರ್ತಿ, ಅನಂತ ಕಲ್ಯಾಣ ಗುಣಪರಿಪೂರ್ಣನು ಹಾಗೂ ದೋಷ ದೂರನೆಂಬುದನ್ನು "ವಿಧಿಭವಾದ್ಯರ ಪೊರೆವ ದಾತನು, ತುದಿ ಮೊದಲು, ಮಧ್ಯಮವಿರದಿತನು, ಉದುಭವಾದಿಗಳಿಗಿವ ಕರ್ತನು, ತ್ರಿದಶಪೂಜಿತ, ತ್ರಿಭುವನೇಶ, ಸದುವಿಲಾಸದಿ ಸ್ವಾಮಿತೀರ್ಥದಿ, ಉದಿಸುತಿರೆ ಸಿರಿಮಹಿಳೆ ಸಹಿತದಿ, ಪದುಮನಾಭ ಪುರಂದರವಿಠಲ ಪ್ರತಿ ವರುಷ ಬ್ರಹ್ಮೋತ್ಸವದಿ ಮೆರೆಯುತ". ಎಂದಿದ್ದಾರೆ.

ಪುರಂದರಾದಿದಾಸರು ಪ್ರಭುವಾದ ಶ್ರೀನಿವಾಸನನ್ನು ದರ್ಶನಮಾಡಿದ ಬಗೆಯನ್ನು ಬಹು ಚಮತ್ಕಾರವಾಗಿ ಭಕ್ತಿಯಿಂದ ವರ್ಣಿಸಿರುತ್ತಾರೆ. ಆ ಕೃತಿಯನ್ನು ಹಾಡಿದಾಗ ಹಾಗೂ ಕೇಳಿದಾಗ ಸಾಕ್ಷಾತ್ ಶ್ರೀನಿವಾಸನೇ ನಮ್ಮ ಕಣ್ಣೆದುರಿನಲ್ಲಿ ಬಂದು ನಿಂತ ಹಾಗೆ ಭಾಸವಾಗುತ್ತಿದೆ.

ಕಂಡೆ ಕಂಡೆ ಸ್ವಾಮಿಯ ಬೇಡಿಕೊಂಡೆ ॥ ಪ ॥

ಕಂಡೆ ತಿರುಪತಿ ವೆಂಕಟೇಶನ, ಕಾರುಣ್ಯಾತ್ಮಕ
ಸಾರ್ವಭೌಮನ

ಕಾಮಿತಾರ್ಥಗಳೀವ ದೇವನ, ಕರುಣಾನಿಧಿ
ಎಂದೆನಿಸಿ ಮೆರೆವನ ॥ ಅ ॥

ಕೋಟಿ ಸೂರ್ಯ ಪ್ರಕಾಶನೆನಿಪ ಕಿರೀಟವನು
ಮತ್ಸಕದಿ ಕಂಡೆನು

ನೋಟಕಾಶ್ಚರ್ಯವಾದ ನಗೆ ಮುಖ
ನೊಸಲಿನಲಿ ಕಿರುಮಣಿಯ ಕಂಡೆನು

ಸಾಟಿ ಇಲ್ಲದ ಚತುರ ಹಸ್ತದಿ ಶಂಖ, ಚಕ್ರ,
ಗದಾಬ್ಜ ಕಂಡೆ

ಬೂಟಕದ ಮಾತಲ್ಲ ಕೇಳಿರೋ ಭೂರಿ
ದೈವರ ಗಂಡನಂಘ್ರಿಯ ॥ ೧ ॥

ತಪ್ಪುಕಾಣಿಕೆ ಕಪ್ಪಗಳನು ಸಪ್ತದ್ವೀಪಗಳಿಂದ
ತರಿಸುವ

ಉಪ್ಪು ಓಗರಗಳನು ಮಾರಿಸಿ ಉಚಿತದಿಂದಲಿ
ಹಣವ ಗಳಿಸುವ

ಇಪ್ಪತ್ತು ದುಡ್ಡಿಗೆ ಸೇರು ತೀರ್ಥವ ಒಪ್ಪದಲಿ
ಕ್ರಯಮಾಡಿ ಕೊಡಿಸುವ

ಸರ್ಪಶಯನನ ಸಾರ್ವಭೌಮನ ಅಪ್ಪ
ವೆಂಕಟರಮಣನಂಘ್ರಿಯ ॥ ೨ ॥

ಉರದಿ ಸಿರಿದೇವಿ ಇರಲು ಕಂಡೆನು, ಉನ್ನತದಿ
ಕೌಸ್ತುಭವ ಕಂಡೆನು

ಗರುಡ, ಕಿನ್ನರ, ನಾರದಾದಿ ಗಂಧರ್ವರನು
ಎಡಬಲದಿ ಕಂಡೆನು



ಶ್ರೀ ಪದ್ಮಾವತೀ ದೇವಾಲಯ

ಆರ್ಜಿತ ಅಭಿಷೇಕ

ತಿರುಚಾನೂರಿನಲ್ಲಿನ ಪದ್ಮಾವತೀದೇವಿಗೆ ಪ್ರತಿ ಶುಕ್ರವಾರವೂ ಆರ್ಜಿತ ಅಭಿಷೇಕ ಸೇವೆ ಏರ್ಪಾಟು ಮಾಡಲಾಗಿದೆ. ಟಿಕೆಟ್ಟಿಗೆ ರೂ. 100/- ಸಲ್ಲಿಸಿ ಗೃಹಸ್ಥರು ಭಾಗವಹಿಸಬಹುದು. ಗೃಹಸ್ಥರು, ಅವರ ಸಂಬಂಧೀಕರು ಒಟ್ಟು ಇಬ್ಬರು ವ್ಯಕ್ತಿಗಳು ಕ್ಷೀರ ಪಾತ್ರೆಗಳನ್ನು ಆಲಯದಲ್ಲಿ ಮೆರವಣಿಗೆಯಲ್ಲಿ ಕೊಂಡು ಹೋಗಲು ಅನುಮತಿಸಲ್ಪಡುವರು. ಅನಂತರ ಅವರು ಅಭಿಷೇಕ ದರ್ಶನ ಮಾಡಬಹುದು. ಆದರೆ ಪ್ರಸಾದಮಾತ್ರ ಕೊಡಲ್ಪಡುವುದಿಲ್ಲ. ಭಕ್ತರು ಈ ಸದವಕಾಶವನ್ನು ಉಪಯೋಗಿಸಿಕೊಳ್ಳಬಹುದು.

ಶರಧಿ ಶಯನನ ಸಾರ್ವಭೌಮನ
ವರದ ಪುರಂದರವಿಠಲನಂಘ್ರಿಯ ॥ ೩ ॥

— ಹೀಗೆ ಕಂಡಮೇಲೆ ಪುರಂದರದಾಸರು ಅಂದರು,

"ದಣಿಯೆ ನೋಡಿದೆನೋ ವೆಂಕಟನ ।
ವೆಂಕಟನ ॥
ಮನದಣಿಯ ನೋಡಿದೆ...
ಪುರಂದರದಾಸರು ಮುಂದುವರಿದು –
ನಿನ್ನ ನೋಡಿ ಧನ್ಯನಾದೆನೊ ಶ್ರೀನಿವಾಸ
॥ ಪ ॥

ನಿನ್ನ ನೋಡಿ ಧನ್ಯನಾದೆ ಎನ್ನ ಮನೋ
ನಯನಕೀಗ
ಇನ್ನು ದಯಮಾಡೊ, ಸುಪ್ರಸನ್ನ ಸ್ವಾಮಿ,
ಪಾಂಡುರಂಗ ॥ ಅ ॥

ಪಕ್ಷಿವಾಹನ, ಲಕ್ಷ್ಮೀರಮಣ, ಲಕ್ಷ್ಮಿ ನಿನ್ನ
ವಕ್ಷದಲ್ಲಿ
ರಕ್ಷೆ, ಶಿಷ್ಟರ ರಕ್ಷೆ, ಪಾಂಡವ ಪಕ್ಷ, ರಕ್ಷ,
ಕಮಲಾಕ್ಷ ॥ ೧ ॥

ಕಂತುಜನಕ ಕೇಳೋ ನೀ ನಿರಂತರದಿ ನಿನ್ನ
ಸೇವೆ
ಎನ್ನಂತರಂಗದಿ ಪಾಲಿಸಯ್ಯ
ಹೊಂತಕಾರಿ ಪುರಂದರವಿಠಲ ॥ ೨ ॥

ಪುರಂದರದಾಸರು ಬಹು ಚಮತ್ಕಾರವಾಗಿ ಶ್ರೀನಿವಾಸನಿಗೆ,

ತಿರುಪತಿ ವೆಂಕಟರಮಣ ನಿನಗ್ಯಾತಕೆ
ಬಾರದು ಕರುಣ ॥ ಪ ॥

ನಂಬಿದೆ ನಿನ್ನಯ ಚರಣ ಪರಿಪಾಲಿಸಬೇಕೂ
ಸುಗುಣ ॥ ಅ ॥

ಅಳಗಿರಿಯಿಂದಲಿ ಬಂದ
ಸ್ವಾಮಿ ಅಂಜನ ಗಿರಿಯಲಿ ನಿಂದ
ಕೊಳಲು ಧ್ವನಿಯೂದೋ ಚಂದ – ನಮ್ಮ
ಕುಂಡಲರಾಯ ಮುಕುಂದ ॥ ೧ ॥

ಮೂಡಲಗಿರಿಯಲಿ ನಿಂತ ।
ಮುದ್ದು ವೆಂಕಟಪತಿ ಬಲವಂತ
ಈಡಿಲ್ಲ ನಿನಗೆ ಶ್ರೀಕಾಂತ ।
ಈರೇಳು ಲೋಕಕನಂತ ॥ ೨ ॥

ಪಾಪವಿನಾಶಿನಿ ಸ್ನಾನ,
ಹರಿ ಪಾದೋದಕವೇ ಪಾನ
ಕೋಪಠಾಪಗಳನ್ನಿಧಾನ,
ನಮ್ಮ ಪುರಂದರವಿಠಲನ ಧ್ಯಾನ ॥ ೩ ॥

ಎಂದು ಹೇಳುತ್ತಾ ಕುಣಿದಾಡಿದ್ದಾರೆ

ಪುರಂದರದಾಸರು ಮುಂದುವರಿದು "ವೆಂಕಟರಮಣ ವೇದಾಂತ ನಿನ್ನಯ ಪಾದ ಪಂಕಜ ಕಂಡ ಮೇಲೆ। ಮಂಕು ಮಾನವರ ಬೇಡಿಸುವುದುಚಿತವೇ, ಶಂಖ ಚಕ್ರಾಂಕಿತನೆ" ಎಂದು ಹೇಳುತ್ತಾ ಸಕಲ ಭಕ್ತರಿಗೂ "ಶ್ರೀನಿವಾಸನ ಅಂಘ್ರಿಸೇವಾ ಮಾಡುವ ಬನ್ನಿ ದೃಢಮತಿ ಉಳ್ಳವರು" ಎಂದು ಆಹ್ವಾನಿಸಿರುತ್ತಾರೆ. ಮತ್ತು ಮಮತೆಯಿಂದ "ಶ್ರೀನಿವಾಸ ಬಂದ ಕೋನೇರಿ ತಿಮ್ಮಪ್ಪ, ವಾಣಿ ಅರಸನಯ್ಯ" ಎಂದು ಕೂಗುತ್ತಾ "ವೆಂಕಟರಮಣನೆ ಬಾರೊ, ಶೇಷಾಚಲವಾಸನೆ ಬಾರೊ। ಪಂಕಜನಾಭ ಪರಮ ಪವಿತ್ರ, ಶಂಕರ ಮಿತ್ರನೆ ಬಾರೋ" ಎಂದು ಪ್ರಾರ್ಥಿಸಿ ಕೈಮುಗಿದು "ಶ್ರೀನಿವಾಸ ನೀನೇ ಪಾಲಿಸೋ ಆಶ್ರಿತಜನ ಪರಿಪಾಲ ಗಾನಲೋಲ ಶ್ರೀ ಮುಕುಂದನೆ, ಧ್ಯಾನವಾಳ್ವ ಸಜ್ಜನರ ಮಾನದಿಂ ಪರಿಪಾಲಿಸುವನೆ ವೇಣುಗೋಪಾಲ ವೇದವೇದ್ಯ ನಿತ್ಯಾನಂದ॥ ಅನುದಿನ ಅನೇಕ ರೋಗಂಗಳನು ಅನುಭವಿಸಿದೆನು ಘನ ಮಹ ಮಹಿಮನೇ ಕೇಳಯ್ಯಾ ತನುವಿನಲ್ಲಿ ಬಲವಿಲ್ಲ, ನೆನೆದಮಾತ್ರಾ ಸಲಹುವಿ ಹನುಮಧೀಶ ಪುರಂದರ ವಿಠಲ ನೀ ಸಲಹೋ ಸ್ವಾಮಿ" ಎಂದು ಬೇಡಿಕೊಂಡಿದ್ದಾರೆ "ಗೋವಿಂದ ನಿನ್ನಾನಂದ ಸಾಧನ ಸಕಲವು ನಿನ್ನಾನಂದ ಮಂಗಳ ಮಹಿಮಾ ಶ್ರೀ ಪುರಂದರವಿಠಲ ಹಿಂಗದೆ ಭಕ್ತರ ಕಾಯೋದೆ ಆನಂದ" ಎಂದು ಮೈಮರೆದು ಕುಣಿದಿದ್ದಾರೆ.

ಪುರಂದರದಾಸರು ದೈನ್ಯದಿಂದ ದಿಂದ ಶ್ರೀನಿವಾಸನಿಗೆ "ನೀ ತಂದೆ ನಾ ಬಂದೆ, ಕಾಮದಲಿ ತಂದೆ, ಕ್ರೋಧದಲಿ ತಂದೆ, ತಾಮಸ ಕಡುಯೋನಿಯಲಿ ನೀ ತಂದೆ ನಾ ಬಂದೆ, ಒಂದಲ್ಲ, ಎರಡಲ್ಲ, ನೂರಲ್ಲ,ನಾಲ್ಕಲ್ಲ, ಎಂಬತ್ತನಾಲ್ಕು ಲಕ್ಷ ಯೋನಿಯಲಿ ನೀ ತಂದೆ ನಾ ಬಂದೆ, ಹಿಂದಿನ ಜನ್ಮ ಹೇಗಾದರಾಗಲಿ ಮುಂದೆನ್ನ ಕಾಯೋ ಪುರಂದರ ವಿಠಲ" ಎಂದೂ, "ಕಿಚ್ಚಿನೊಳಗೆ ಬಂದ ಕೀಟನು ನಾನಯ್ಯ ಅಚ್ಯುತ ಕಾಯೋ ಅನಂತನೆ ಕಾಯೊ, ಗೋವಿಂದ ಪೊರೆಯೋ ಪುರಂದರವಿಠಲ" ಎಂದೂ "ನಿನ್ನ ಧ್ಯಾನವ ಕೊಡೊ ಎನ್ನ ಧನ್ಯನಮಾಡೊ, ಪನ್ನಗ ಶಯನ ಶ್ರೀ ಪುರಂದರ ವಿಠಲ। ಅಂಬುಜ ನಯನನೆ, ಅಂಬುಜ ಜನಕನೆ, ಅಂಬುಜನಾಭ ಶ್ರೀ ಪುರಂದರ ವಿಠಲ। ಭಾಗೀರಥಿ ಪಿತ, ಭಾಗವತರ ಪ್ರಿಯ, ಯೋಗಿಗಳರಸ ಶ್ರೀ ಪುರಂದರ ವಿಠಲಾ ॥"



–ಎಂದು ಮುಂತಾಗಿ ದಾಸ ಶ್ರೇಷ್ಠರೆನಿಸಿದ ಪುರಂದರ ದಾಸರು ಜೀವ ಶ್ರೇಷ್ಠರೆನಿಸಿದ ಮುಖ್ಯ ಪ್ರಾಣನಲ್ಲಿ ಸ್ಥಿರನಾಗಿರುವ ಸರ್ವಶ್ರೇಷ್ಠ, ಸರ್ವೋತ್ತಮನಾದ ನಮ್ಮ ವೆಂಕಟಾದ್ರಿನಿಲಯದಲ್ಲಿ ವಿರಾಜಿಸುತ್ತಿರುವ ಶ್ರೀ ವೆಂಕಟೇಶನನ್ನು ಬಹು ಪ್ರಕಾರವಾಗಿ ಯುಕ್ತ ಶಾಸ್ತ್ರ ಕ್ರಮದಲ್ಲಿ ವರ್ಣಿಸಿ, ಕೊಂಡಾಡಿ, ಹಾಡಿ, ಪಾಡಿ, ಕುಣಿದು ಕುಪ್ಪಳಿಸಿ ಆ ಮಹಾನುಭಾವನ ಸಂಪೂರ್ಣ ಕೃಪಾಪಾತ್ರರಾಗಿದ್ದಾರೆ. ಇವರು "ಅಪ್ಪ ಬಾರೋ ತಿಮ್ಮಪ್ಪ ಬಾರೊ ಕಂದರ್ಪನಯ್ಯನೆ ಕಂಚಿವರದಾ ಬಾರೊ" ಎಂದು ಕರೆದಿರುವುದು ಎಂಥಹವರನ್ನಾದರೂ ದೇವರಕಡೆ ಸೆಳೆಯುವಂತಹದು. ಹೀಗೆ ಸಕಲ ಸಜ್ಜನ ವಂದ್ಯನಾಗಿ ಸ್ಥಿರನಾದ ನಮ್ಮ ಶ್ರೀ ಶ್ರೀನಿವಾಸನು ಸಕಲ ಸಜ್ಜನರನ್ನು ಅನವರತ ಸಂರಕ್ಷಿಸಲಿ.

---

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.
* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.
* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ.
* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.
* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.
* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.
* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.
* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ.
* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7–ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ.
* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ.
* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ.
* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.
* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.
* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಕೆ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8–30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ. ಶ್ರೀ ವೆಂಕಟೇಶ್ವರನ ಉದ್ದಾಮ ಭಕ್ತ, ಕವಿ ಅನ್ನಮಾಚಾರ್ಯರ ಅಂಚೆಚೀಟಿಯನ್ನು ಬಯಸುವವರು ಕೊಂಡುಕೊಳ್ಳಬಹುದು.

# ಕರ್ನಾಟಕದಲ್ಲಿ ಹಿಂದೂ ಧರ್ಮ

ಪ್ರಾಚೀನ ಸಾಹಿತ್ಯದಲ್ಲಿ ಕರ್ನಾಟಕದ ಉಲ್ಲೇಖವು ಮೊಟ್ಟ ಮೊದಲು ಕಾಣ ಬರುವುದು ಮಹಾಭಾರತದಲ್ಲಿ. ರಾಮಾಯಣದಲ್ಲಿ ಕರ್ನಾಟಕವು ಒಂದು ರಾಜ್ಯವೆಂದಾಗಲೀ, ಅಥವಾ ಒಂದು ಜನಾಂಗವೆಂದಾಗಲೀ ವರ್ಣಿಸಿರುವುದು ಕಾಣಸಿಗುವುದಿಲ್ಲ. ದಕ್ಷಿಣಾಪಥವನ್ನೆಲ್ಲ ಚೆನ್ನಾಗಿ ಬಲ್ಲ ಸುಗ್ರೀವನು ಸೀತಾಮಾತೆಯನ್ನು ಹುಡುಕಲು ಹೊರಟ ತನ್ನ ಸೇನೆಯ ನಾಯಕರಿಗೆ ಗೋದಾವರಿ, ಕೃಷ್ಣಾ, ಕಾವೇರಿ ಹಾಗೂ ತಾಮ್ರಪರ್ಣಿ ನದಿಗಳನ್ನು ವರ್ಣಿಸಿ ಹೇಳುತ್ತಾನೆ. ಈ ತಾಮ್ರಪರ್ಣಿ ನದಿ ಬೆಳಗಾವಿಯ ಸಮೀಪದಲ್ಲಿಯ ಕೋವಾಡ ಎಂಬಲ್ಲಿ ಹರಿಯುತ್ತದೆ. ಇದು ಚಂದ್ರಗಣ ತಾಲ್ಲೂಕಿಗೆ ಸೇರಿದ ಒಂದು ಗ್ರಾಮ. ಈ ನದಿಗಳಂತೆ ಆತನು ಅನೇಕ ಪರ್ವತಗಳನ್ನು ವರ್ಣಿಸಿ ಹೇಳುತ್ತಾನೆ. ಅಲ್ಲದೆ ಋಷ್ಟಿಕ, ಮಾಹಿಷಕ, ಆಂಧ್ರ, ಪುಂಡ್ರ, ಚೋಳ ಪಾಂಡ್ಯ, ಕೇರಳ ಮೊದಲಾದ ದೇಶಗಳ ಉಲ್ಲೇಖವು ರಾಮಾಯಣದಲ್ಲಿ ಕಾಣಸಿಗುತ್ತವೆ. ಈ ಋಷ್ಟಿಕ ಎಂಬುದು ರಾಷ್ಟ್ರಕೂಟರ ಮೂಲಸ್ಥಾನವಾಗಿರಬಹುದು. 'ಮಹಿಷಿಕ' ಎಂಬುದೇ ಮೈಸೂರು, 'ವೈಜಯಂತಾ' ಎಂಬುದು ಬನವಾಸಿಯಾಗಿರಬಹುದು. ಆದರೆ 'ಕರ್ನಾಟಕ' ಎಂಬ ಹೆಸರು ಪ್ರತ್ಯೇಕವಾಗಿ ಅಥವಾ ಸೂಚ್ಯವಾಗಿ ರಾಮಾಯಣದ ಯಾವ ಭಾಗದಲ್ಲಿಯೂ ಕಾಣಸಿಗುವುದಿಲ್ಲ. ಇದನ್ನು ಗಮನಿಸಿದಾಗ ಆ ಕಾಲದಲ್ಲಿ ಕರ್ನಾಟಕ ಎಂಬ ಹೆಸರು ಸುಪರಿಚಿತವಾಗಿರಲಿಲ್ಲ ಎಂದೆನಿಸುತ್ತದೆ. ಆಗ ಈ ಭಾಗವನ್ನೆಲ್ಲ ದಂಡಕಾರಣ್ಯವೆಂದು ಕರೆಯುತ್ತಿರಬಹುದೆಂದು ಕೆಲವರು ಅಭಿಪ್ರಾಯ ಪಡುತ್ತಾರೆ.

ರಾಮಾಯಣ ಕಾಲದಲ್ಲಿ ನಿಚ್ಚಳವಾಗಿ ಕಾಣಸಿಗದ ಕರ್ನಾಟಕದ ಪ್ರದೇಶವನ್ನು ಮಹಾಭಾರತದ ಕಾಲದಲ್ಲಿ ನಾವು ಸ್ಪಷ್ಟವಾಗಿ ಕಾಣಬಹುದು. ಇನ್ನು ಶ್ರೀಮದ್ಭಾಗವತ ಗ್ರಂಥದಲ್ಲಿ ಈ ನಾಡಿನ ಸೀಮಾರೇಖೆಯನ್ನು ಕುರಿತು"ಕಾಂಕಟ ಕರ್ನಾಟಕಾನ್ ದಕ್ಷಿಣ ದೇಶಾನ್" ಎಂದು ಹೇಳಿ ಅದು ನಾಗಪುರದವರೆಗೆ ವ್ಯಾಪಿಸಿತ್ತೆಂದು ಅರ್ಥ ವಿವರಣೆಗಳನ್ನೀಯಲಾಗಿದೆ. ಈ ಎಲ್ಲ ವಿಷಯಗಳನ್ನವಲೋಕಿಸಿದಾಗ ಕ್ರಿಸ್ತಪೂರ್ವ ಕಾಲದಿಂದಲೂ ಕರ್ನಾಟಕದ ಅಸ್ತಿತ್ವವನ್ನು ನಾವು ಗ್ರಹಿಸಬಹುದು. ಕರ್ನಾಟಕದ ಧಾರ್ಮಿಕ ಚರಿತ್ರೆಯನ್ನು ನಾವು ರಾಜಕೀಯ ಚರಿತ್ರೆಯಷ್ಟೇ ಮಹತ್ವದ್ದಾಗಿ ಗಣಿಸಬಹುದು.

ಬಹುಕಾಲದಿಂದಲೂ ಹಿಂದೂಧರ್ಮವನ್ನು ಪುನರುಜ್ಜೀವನ ಮಾಡಿ ಮತ್ತೆ ಮತ್ತೆ ಪ್ರತಿಷ್ಠಾಪನೆ ಮಾಡಿದ ನಾಡು ನಮ್ಮದು. ಹಿಂದೂ ಧರ್ಮದಲ್ಲಿ ಅನೇಕ ಸಿದ್ಧಾಂತಗಳು ಅಡಕವಾಗಿದ್ದು ಇತರ ಮುಖ್ಯ ಮತಧರ್ಮಗಳಲ್ಲಿ ಇರುವಂತೆ ಒಬ್ಬರೇ ಸ್ಥಾಪಕರು ಇಲ್ಲದಿರುವುದು ಗಮನಾರ್ಹವಾದ ವಿಷಯ. ಈ ಧರ್ಮವು ಕೆಲವು ಸಿದ್ಧಾಂತಗಳ ಮೇಲೆ ಯಾವ ಕಾಲಕ್ಕೂ ಒಂದೇ ರೂಪದಲ್ಲಿ ನಿರ್ಮಿಸಿರುವುದಿಲ್ಲ. ಇದರಲ್ಲಿ ಅವಿರತವಾಗಿ ಬದಲಾವಣೆಗಳಾಗುತ್ತಿರುವುದು ವಿಶೇಷದ ಮಾತು. ಅನೇಕ ವೇದಾಂತ ಮಾರ್ಗಗಳೂ ಸಿದ್ಧಾಂತಗಳೂ, ತಪೋನಿಷ್ಠರಾದ ಮಹರ್ಷಿಗಳ ಉದ್ಗಾರಗಳೂ, ವ್ಯಾಖ್ಯಾನಕಾರರ ವಿಮರ್ಶೆಗಳೂ, ಎಲ್ಲವನ್ನೂ ಒಳಗೊಂಡು ಪದೇ ಪದೇ ಪರಿವರ್ತಿತವಾಗಿ ಬಹುಶಾಖೆಗಳಾಗಿ ಪ್ರವ



ಹಿಸುತ್ತಿದ್ದರೂ, ಒಟ್ಟಿನಲ್ಲಿ, ಒಂದೇ ಮುಖ್ಯ ಧರ್ಮವನ್ನು ಪ್ರಸರಿಸುತ್ತಾ ಮುನ್ನಡೆಯುತ್ತಿರುವುದು. ಪ್ರಪಂಚದ ಇತರ ಮತಧರ್ಮಗಳ ಸಾರವನ್ನೆಲ್ಲ ಇದರ ಬೆಳವಣಿಗೆಯ ಕ್ರಮದಲ್ಲಿ ಕಾಣಬಹುದು.

ಈ ಹಿಂದೂ ಧರ್ಮವನ್ನು ಈಗಿನ ಸ್ವರೂಪಕ್ಕೆ ತಂದವರಲ್ಲಿ ಆರ್ತರೂ, ಜಿಜ್ಞಾಸುಗಳೂ, ಅರ್ಥಾರ್ಥಿಗಳೂ, ಜ್ಞಾನಿಗಳೂ, ಎಲ್ಲರೂ ಇರುತ್ತಾರೆ.

"ಆರ್ತೋ ಜಿಜ್ಞಾಸುರರ್ಥಾರ್ಥಿ
ಜ್ಞಾನೀಚ ಭರತರ್ಷಭ" (ಗೀತೆ)

ಸಂಹಿತೆಗಳೂ, ಬ್ರಾಹ್ಮಣಗಳೂ, ಆರಣ್ಯಕಗಳೂ, ಉಪನಿಷತ್ತುಗಳೂ, ಬೌದ್ಧ, ಜೈನ, ಅದ್ವೈತ, ವಿಶಿಷ್ಟಾದ್ವೈತ, ಶಕ್ತಿವಿಶಿಷ್ಟಾದ್ವೈತ, ಸಿದ್ಧಾಂತಗಳೂ, ಭಾಗವತರ ದೇವರನಾಮಗಳೂ, ಉಗಾಭೋಗಗಳೂ, ಶಿವಶರಣಶರಣೆಯರ ವಚನಗಳೂ, ರಾಮಾಯಣ, ಮಹಾಭಾರತಗಳೂ, ಭಾಗವತ, ಅಷ್ಟಾದಶ ಪುರಾಣಗಳೂ–ಇವೇ ಮೊದಲಾದವುಗಳ ಸಾರವೆಲ್ಲವನ್ನೂ ಸಂಗ್ರಹಿಸಿ ಸ್ವಷ್ಟಾತ್ಮಕ ಕ್ರಮದಲ್ಲಿ ಈ ಹಿಂದೂ ಧರ್ಮವು ಹರಿಯುತ್ತಿರುವುದು.

ಅನುಷ್ಠಾನ ಕ್ರಮಗಳಲ್ಲಿ ದೋಷಗಳಾಗಲೀ, ಆಭಾಸಗಳಾಗಲಿ ತೋರಿ ಬರುತ್ತಿರಲಿಲ್ಲವೆಂದಾಗಲೀ ಅಥವಾ ಈಗಿನ ಸ್ಥಿತಿಯಲ್ಲಿ ಇಲ್ಲವೆಂದಾ ಅಲ್ಲ. ಮತಧರ್ಮಗಳ ಬೆಳವಣಿಗೆಯ ಕ್ರಮದಲ್ಲಿ ಅನೇಕ ದೋಷಗಳು ಉಂಟಾಗುತ್ತಿದ್ದುದು ಈ ಧರ್ಮದ ಬೆಳವಣಿಗೆಯ ಕ್ರಮದಲ್ಲಿಯೂ ಉದ್ದಕ್ಕೂ ಕಂಡುಬಂದಿದೆ. ಆದರೆ ಈ ರೀತಿಯ ವಿಕಾರಗಳು ಹೆಚ್ಚಾಗಿ ಅಭಾಸವಾಗಿ ಪರಿಣಾಮವಾಗುತ್ತಿದ್ದ ಸಮಯಗಳಲ್ಲಿ ಆಗಿಂದಾಗ್ಗೆ ಒಬ್ಬೊಬ್ಬರು ಮಹಾತ್ಮರುಗಳು ಹುಟ್ಟಿ ಮಲಿನವನ್ನು ತೊಳೆದು ಸಂಪ್ರದಾಯಗಳನ್ನು ಸಂಸ್ಕರಿಸಿ ಜೀವನ ತತ್ತ್ವಗಳಿಗೆ ನವಚೈತನ್ಯವನ್ನು ತುಂಬಿ ತಮ್ಮ ಅಸಾಧಾರಣ ಪ್ರತಿಭೆಯಿಂದ ಬೆಳಗಿಸುತ್ತಿರುವುದು ಇದರ ವಿಶೇಷ ಲಕ್ಷಣ.

ಬಹು ಪೂರ್ವಕಾಲದಲ್ಲೇ ಎಂದರೆ ಋಗ್ವೇದ ಸಂಹಿತೆಯ ಕಾಲದಲ್ಲೇ ದೇವರು ಒಬ್ಬನೇ ಅವನನ್ನು ಅನೇಕ ಹೆಸರುಗಳಿಂದ ಕರೆಯುತ್ತಾರೆ ಎಂಬ ಭಾವನೆ ಉಂಟಾಗಿದ್ದಿತು.

ಇಂದ್ರಂ ಮಿತ್ರಂ
ವರುಣಮಗ್ನಿ ಮಾಹುರಥೋ
ದಿವ್ಯಃ ಸುಪರ್ಣೋ ಗುರುತ್ಮಾನ್
ಏಕಂ ಸದ್ವಿಪ್ರಾ ಬಹುಧಾ ವದಂತ್ಯಗ್ನಿ
ಯಮಂ ಮಾತರಿಶ್ವಾಮಿ ಮಾಹುಃ

ಅವನನ್ನು ಇಂದ್ರ, ಮಿತ್ರ, ವರುಣ, ಅಗ್ನಿ ಎಂದು ಕರೆಯುತ್ತಾರೆ, ಹೀಗೆಯೇ ಇವನು ಒಳ್ಳೆಯ ರೆಕ್ಕೆಗಳುಳ್ಳ ಗರುಡನೂ ಆಗಿದ್ದಾನೆ. ಇರುವನು ಒಬ್ಬನೇ. ಪಂಡಿತರು ಅವನನ್ನು ಅಗ್ನಿ

**ಶ್ರೀ ಆದ್ಯ ರಾಮಾಚಾರ್ಯ**

ಯಮ, ಮಾತರಿಶ್ವ ಎಂದು ಅನೇಕ ಹೆಸರುಗ ಳಿಂದ ಕರೆಯುತ್ತಾರೆ ಎಂದರ್ಥ. ಎಲ್ಲಕ್ಕೂ ದೊಡ್ಡ ಒಬ್ಬ ದೇವರನ್ನು ಬ್ರಹ್ಮ, ಬೃಹಸ್ಪತಿ, ಬ್ರಹ್ಮಣಸ್ಪತಿ ಎಂದು ಮುಂತಾಗಿ ವರ್ಣಿಸುತ್ತಿದ್ದರು. ಆಗಿನ ಕಾಲದಲ್ಲಿ ಜನತೆಯಲ್ಲಿ ಎಷ್ಟು ವೈಶಾಲ್ಯ ಭಾವವು ಬೆಳೆದಿತ್ತೆಂಬುದಕ್ಕೆ ಋಗ್ವೇದ ಸಂಹಿತೆಯ ಕೊನೆಯ ಸೂತ್ರದಲ್ಲಿ ಹೇಳಿರುವ ಸಂದೇಶವು ಸರ್ವದಾ ಸ್ಮರಣೀಯವಾಗಿದೆ.

ಸಂಗಚ್ಛಧ್ವಂ ಸಂವದಧ್ವಂ ಸಂವೋ
ಮನಾಂಸಿ ಜಾನತಾಂ। ಸಮಾನೋ ಮಂತ್ರಃ
ಸಮಿತಿಃ ಸಮಾನೀ ಸಮಾನಂ ಮನಸ್ಸಹ
ಚಿತ್ತಮೇಷಾಂ। ಸಮಾನೀನ ಆಕೂತಿಃ
ಸಮಾನ ಹೃದಯಾನಿವಃ ಸಮಾನ
ಮಸ್ತುವೋ ಮನೋ ಯಥವಾವಹ
ಸುಸಹಾಸತೀ

'ಎಲ್ಲರೂ ಜತೆಯಾಗಿ ಕೂಡಿ, ಒಟ್ಟಿಗೆ ಕಲೆತು ಸಹೃದಯತೆಯಿಂದ ಮಾತನಾಡಿ; ಸಮಿತಿಯಲ್ಲಿ ಎಲ್ಲರೂ ಭಾಗಿಗಳಾಗಿ; ವ್ಯಕ್ತಿಮನವೂ ಸಮಿತಿಯ ಮನವೂ ಒಂದಾಗಲಿ; ಆಲೋಚನೆಗಳೂ ಹಾಗೆಯೇ ಒಂದಾಗಲಿ; ಸರ್ವಾನುಮತದಿಂದ ಒಂದು ತೀರ್ಮಾನವಾಗಲಿ; ಹೃದಯಗಳು ಒಂದುಗೂಡಲಿ; ಎಲ್ಲರೂ ಸಂತೋಷದಿಂದ ಒಂದಾಗಿರುವುದಕ್ಕೆ ಅನುಕೂಲಿಸುವಂತೆ ಮನಸ್ಸುಗಳು ಕಲೆಯಲಿ.' ಇದು ಎಷ್ಟು ಒಪ್ಪಾದ ಸಂದೇಶ! ಸಂಸ್ಥಾನಗಳ ಯೋಜನೆಗಳ ಸಾಕ್ಷಾತ್ಕಾರಕ್ಕೆ ಎಷ್ಟು ಸಹಾಯಕವಾಗಿದೆ! ಎಲ್ಲರಿಗೂ ಎಲ್ಲಾ ಕಾಲಕ್ಕೂ ಅನ್ವಯಿಸುವ ದಿವ್ಯ ಸಂದೇಶ.

ಕನ್ನಡ ಪ್ರಾಂತ್ಯದಲ್ಲಿ ಮತಧರ್ಮಗಳನ್ನು ಪುನರುಜ್ಜೀವನ ಮಾಡಿದ ಮಹನೀಯರು ಬಹು ಮಂದಿ. ಈ ಕನ್ನಡ ದೇಶದಲ್ಲಿ ಧರ್ಮ ಪ್ರಚಾರ ಮಾಡಿದವರಲ್ಲಿ ಪ್ರಸಿದ್ಧ ಮತಾಚಾರ್ಯರುಗಳಾದ ಶಂಕರಾಚಾರ್ಯರು, ರಾಮಾನುಜಾಚಾರ್ಯರು, ಮಧ್ವಾಚಾರ್ಯರು, ಬಸವಣ್ಣನವರು ಮತ್ತು ಅನೇಕ ಜೈನ ಅರ್ಹಂತರೂ, ವಿದ್ಯಾರಣ್ಯರು ಪುರಂದರದಾಸರು, ಕನಕದಾಸರು ಮುಂತಾಗಿ ಅನೇಕರಿರುತ್ತಾರೆ. ಒಂದೊಂದೂ ಸಿದ್ಧಾಂತದ ಪವಿತ್ರ ಕ್ಷೇತ್ರಗಳಾದ ಶೃಂಗೇರಿ, ತಿರುನಾರಾಯಪುರ (ಮೇಲು ಕೋಟೆ) ಉಡುಪಿ, ಕಲ್ಯಾಣ, ಶ್ರವಣಬೆಳಗೊಳ–ಇವುಗಳು ಕನ್ನಡ ಪ್ರಾಂತ್ಯದಲ್ಲಿವೆ. ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಲಕ್ಷ್ಮೀಶ, ರಾಘವಾಂಕ, ಷಡಕ್ಷರ ದೇವ, ನಾರಣಪ್ಪ, ಮುದ್ದಣ, ಮುಂತಾದ ಕವಿಗಳೂ ಜನಿಸಿರುತ್ತಾರೆ.

## ಶಂಕರಾಚಾರ್ಯರು

ಮೇಲೆ ಹೇಳಿದ ಮತ ಪ್ರತಿಷ್ಠಾಪನೆಯನ್ನು ಮಾಡಿದ ಮುಖ್ಯ ಮಹನೀಯರುಗಳ ವಿಚಾರವಾಗಿ ಸಂಕ್ಷೇಪವಾಗಿ ಪ್ರಶಂಸಿಸುವುದು ಉಚಿತವಾಗಿ ತೋರುತ್ತದೆ. ಇದರಲ್ಲಿ ಕಾಲಕ್ರಮದಲ್ಲಿ ಮೊದಲನೆಯವರು ಶಂಕರಾಚಾರ್ಯರು. ವೈದಿಕ ಧರ್ಮದಲ್ಲಿ ಹಲವು ದೋಷಗಳು ಬೆಳೆದು ಜನರಿಗೆ ಅದು ಅಪ್ರಿಯವಾಗುವಂತೆ ಆಗುತ್ತಿದ್ದ ಸಂದರ್ಭದಲ್ಲಿ ಬೌದ್ಧ ಮತವು ಪ್ರಕಾಶಕ್ಕೆ ಬಂದು, ಅದು ಖಿಲವಾಗುತ್ತಿದ್ದ ಕಾಲದಲ್ಲಿ ಅನೇಕ ಕ್ಷುದ್ರ ಮತಗಳು ತಲೆ ಎತ್ತುತ್ತಿದ್ದವು.

"ಶಾಕ್ತೈಃ ಪಾಶುಪತೈರಪಿ ಕ್ಷಪಣಕೈಃ
ಕಾಪಾಲಿಕೈರ್ವೈಷ್ಣ್ಯೈ ರಪ್ಯನ್ಯೈ ರಹಲೈಃ
ಖಲೈಃ ಖಲುಖಿಲಂ ಧೂರ್ವಾದಿಭಿರ್ವೈದಿಕಂ
ಪಂಥಾನಂ ಪರಿರಕ್ಷಿತುಂ ಕ್ಷಿತಿ ತಲಂ
ಪ್ರಾಪ್ತಃ ಪರಿಕ್ರೀಡಿತೇ"

–ಎಂಬ ಶ್ಲೋಕದಲ್ಲಿ ಆಗ ಪ್ರಚಾರದಲ್ಲಿದ್ದ ಅನೇಕ ಮತಗಳ ಹೆಸರುಗಳು ಕಂಡಿವೆ. ಆ ಸಮಯದಲ್ಲಿ ಶಂಕರಾಚಾರ್ಯರು ಅದ್ವೈತ ಸಿದ್ಧಾಂತವನ್ನು ಪ್ರಚಾರಮಾಡಿ, ಎಲ್ಲ ಮತಗಳವರಿಗೂ ಒಪ್ಪಿಗೆಯಾಗುವಂತೆ ಆದಿತ್ಯ, ಅಂಬಿಕೆ ವಿಷ್ಣು, ಗಣಪತಿ, ಮಹೇಶ್ವರ ಈ ಐದು ದೇವರಗಳನ್ನೂ ಸೇರಿಸಿದ ಪಂಚಾಯತನ ಪೂಜೆಗೆ ಅವಕಾಶ ಮಾಡಿಕೊಟ್ಟು, ವಿವಿಧ ಮತಗಳನ್ನು ಸಮನ್ವಯ ಮಾಡಿ, ವೈದಿಕ ಧರ್ಮದ ದೋಷಗಳನ್ನು ಕಳೆದು ಪರಿಷ್ಕರಿಸಿ ಹಿಂದೂ ಮತವು ಮತ್ತೆ ಮರ್ಯಾದೆಯ ಸ್ಥಾನವನ್ನು ಪಡೆಯುವಂತೆ ಮಾಡಿದರು. ಶೃಂಗೇರಿಯಲ್ಲಿ ಅವರ ಮುಖ್ಯ ಮಠವನ್ನು ಸ್ಥಾಪಿಸಿದರು.

## ಜೈನಮತ

ಕಾಲಕ್ರಮದಲ್ಲಿ ವೈದಿಕ ಮತವು ಅಂಧ ಶ್ರದ್ಧೆಯ ಪರಿಣಾಮವಾಗಿ ವಿಕಾರ ರೂಪಗಳನ್ನು ಹೊಂದುತ್ತಿದ್ದಾಗ ಜೈನ ಮತವು ಕರ್ನಾಟಕದಲ್ಲಿ ಪ್ರಸಿದ್ಧಿಗೆ ಬಂದಿತು. ಈ ಮತವು ಅಹಿಂಸಾ ಧರ್ಮವನ್ನು ದಿಗಂತ ವಿಶ್ರಾಂತವಾಗಿ ಮಾಡಿತು. ಶ್ರವಣ ಬೆಳಗೊಳ ಕ್ಷೇತ್ರವು ಒಟ್ಟು ಭಾರತದ ಜೈನ ಜನಾಂಗಕ್ಕೆ ಪವಿತ್ರ ಕ್ಷೇತ್ರವಾಗಿದೆ. ಅಲ್ಲಿ ಹನ್ನೆರಡು ವರ್ಷಗಳಿಗೊಮ್ಮೆ ನಡೆಯುವ ಮಹಾ ಮಸ್ತಕಾಭಿಷೇಕ ಸಮಯದಲ್ಲಿ ದೇಶದ ಎಲ್ಲ ಪ್ರಾಂತಗಳಿಂದಲೂ ಯಾತ್ರಿಕರು ಬರುತ್ತಾರೆ. ಶ್ರವಣ ಬೆಳಗೊಳದ ಗೊಮ್ಮಟೇಶ್ವರ ವಿಗ್ರಹವೂ ಹಳೇಬೀಡಿನ ಬಸದಿಗಳೂ, ಜೈನರ ಶಿಲ್ಪಚಾತುರ್ಯವನ್ನು ವ್ಯಕ್ತಪಡಿಸುತ್ತವೆ. ಇವುಗಳು ಜೈನ ಮತವು ಆ ಕಾಲದಲ್ಲಿ ಕನ್ನಡ ದೇಶದಲ್ಲಿ ಹೆಚ್ಚಾಗಿ ಜನಪ್ರಿಯವಾಗಿದ್ದುದನ್ನು ತೋರಿಸುತ್ತವೆ.

## ರಾಮಾನುಜಾಚಾರ್ಯರು

ಜೈನಧರ್ಮವು ಹರಡುತ್ತಾ ವೈದಿಕ ಧರ್ಮವು ಶಿಥಿಲವಾಗುತ್ತಿದ್ದ ಕಾಲದಲ್ಲಿ ರಾಮಾನುಜಾಚಾರ್ಯರು ಈ ದೇಶದಲ್ಲಿ ವೈಷ್ಣವ ವಿಶಿಷ್ಟಾದ್ವೈತ ಮತವನ್ನು ಸ್ಥಾಪನೆ ಮಾಡಿ ಮೇಲುಕೋಟೆಯನ್ನು ಪವಿತ್ರಸ್ಥಾನವಾಗಿ ಮಾಡಿದರು. ನಾಥಮುನಿ ಯಮುನಾಚಾರ್ಯರು ಆಳ್ವಾರುಗಳ ಪ್ರಬಂಧವನ್ನು ಸಂಗ್ರಹಿಸಿ ದ್ರಾವಿಡ ಸಂಗೀತ

ಕ್ರಮಕ್ಕೆ ಅನುಗೊಳಿಸಿ, ಭಕ್ತಿಯ ಜೊತೆಗೆ ಜ್ಞಾನಕ್ಕೂ ಪ್ರಾಮುಖ್ಯತೆಯನ್ನು ಮಾಡಿ ಕೊಟ್ಟಿದ್ದ ಕಾರ್ಯವನ್ನು ಮುಂದುವರಿಸಿ ಪ್ರಬಂಧಗಳನ್ನು, ಪರಿಷ್ಕರಿಸಿ ಅವಕ್ಕೆ ಶಾಸ್ತ್ರ ಪ್ರಾಮಾಣ್ಯವನ್ನು ಕೊಟ್ಟು ವಿಶಿಷ್ಟಾದ್ವೈತ ಸಿದ್ಧಾಂತವನ್ನು ಪ್ರಚಾರಕ್ಕೆ ತಂದರು. ಪಾಂಚರಾತ್ರಾಗಮವೂ, ಆಳ್ವಾರರಿಂದ ರಚಿತವಾದ ಪ್ರಬಂಧಗಳೂ, ವೇದದಷ್ಟೇ ಪ್ರಮಾಣವೆಂದು ಪುರಸ್ಕರಿಸಲ್ಪಟ್ಟವು. ಇವರು ವಿಶಾಲಹೃದಯರು, ಕರುಣಿಗಳು, ಜನಪ್ರೇಮಿಗಳು; ಸಮಸ್ತ ಜನಗಳಿಗೂ ಮುಕ್ತಿ ಸುಖದ ಯೋಗವು ಲಭ್ಯವಾಗಬೇಕೆಂಬ ಅಭಿಲಾಷೆ ಉಳ್ಳವರು. ಉಪಾಸನಾ ಭಕ್ತಿಯ ತಮ್ಮ ಮತವನ್ನು ಎಲ್ಲರಿಗೂ ಉಪದೇಶಿಸಿ ಉಪಕಾರ ಮಾಡಿದರು.

## ಮಧ್ವಾಚಾರ್ಯರು

ಇವರು ಭಕ್ತಿ ಪಂಥದಲ್ಲಿ ಮುಖ್ಯವಾದ ದ್ವೈತ ಮತವನ್ನು ಸ್ಥಾಪಿಸಿದವರು. ಉಡುಪಿಯ ಅಷ್ಟ ಮಠಗಳ ಪ್ರತಿಷ್ಠಾಪನಾಚಾರ್ಯರು. ನಾನಾವಿಧವಾದ ದೇವರುಗಳ ಪೂಜೆಯೂ ರೂಢಿಗೆ ಬಂದಿದ್ದ ಕಾಲದಲ್ಲಿ ಸಾತ್ವಿಕ ವೈಷ್ಣವ ಧರ್ಮವನ್ನು ಉಪದೇಶಿಸಿದರು. ಪಶುಯಾಗವು ರೂಢಿಯಲ್ಲಿದ್ದ ಕಾಲದಲ್ಲಿ ಪ್ರಾಣಹಿಂಸೆಯಾಗದಂತೆ ಪಿಷ್ಟ ಪಶುವಿನಿಂದ ಯಜ್ಞವನ್ನು ಮಾಡುವ ರೀತಿಯನ್ನು ಆಚರಣೆಗೆ ತಂದರು. ಉಡುಪಿಯ ಕೃಷ್ಣ ದೇವಾಲಯವನ್ನು ಸ್ಥಾಪಿಸಿದವರು ಇವರೇ. "ಆಕೇಶಾದಾನಖಾಗ್ರೇಭ್ಯಃ ಪೂರ್ಣಚಿತ್ಸುಖ ಶಕ್ತಿಕಂ"- ಅಂದರೆ, ದೇವರು ದೋಷರಹಿತನಾಗಿ ಸಕಲ ಸದ್ಗುಣಗಳಿಂದ ಕೂಡಿದವನೆಂದು ವರ್ಣಿಸಿದರು ಶಂಕರಾಚಾರ್ಯರದು ಜ್ಞಾನಮಾರ್ಗವಾದರೆ ಮಧ್ವಾಚಾರ್ಯರದು ಭಕ್ತಿಮಾರ್ಗ.

## ವೀರಶೈವ

ಈ ಮತವನ್ನು ಕನ್ನಡ ದೇಶದಲ್ಲಿ ಪ್ರಚಾರಕ್ಕೆ ತಂದವರು ಬಸವಣ್ಣನವರು. ಇವರು ಕಲ್ಯಾಣದಲ್ಲಿ ಶಿವಾನುಭವ ಮಂಟಪವೆಂಬ ವಿದ್ಯಾಪೀಠವನ್ನು ಸ್ಥಾಪಿಸಿದರು. ಈ ಮಂಟಪದಲ್ಲಿ ವಿದ್ವಾಂಸರೂ, ವಿರಕ್ತರೂ, ಸಿದ್ಧರೂ, ಜಂಗಮರೂ, ಶರಣೆಯರೂ ಎಲ್ಲರೂ ನೆರೆದು ಕನ್ನಡ ನುಡಿಯಲ್ಲಿ ತಮ್ಮ ಆನಂದಾನುಭವಗಳನ್ನು ತಿಳಿಯಪಡಿಸುತ್ತಿದ್ದರು. ಉಪನಿಷದೃಷಿಗಳು ನಿಧಿಧ್ಯಾಸದ ಪರಮಾವಧಿಯ ಫಲವನ್ನು ಅನುಭವಿಸಿ ಪ್ರಕಾಶಗೊಳಿಸಿದ ತತ್ತ್ವಗಳನ್ನು ಸರಳವಾದ ಮಾತಿನಲ್ಲಿ ಇವರುಗಳು ಹೊರಗೆಡವಿ ಜ್ಞಾನ, ಭಕ್ತಿ, ವೈರಾಗ್ಯ ಮಾರ್ಗಗಳನ್ನು ಎಲ್ಲರಿಗೂ ಸುಲಭವಾಗಿ ತೋರಿಸಿಕೊಟ್ಟು ಶೋಭಿಸುವಂತೆ ಮಾಡಿದರು. ಕಾಯಕಗಳೆಂಬ ಸ್ವಾತಂತ್ರ್ಯದ ಮತ್ತು ಸಮತಾಭಾವದ ವೃತ್ತಿಗಳನ್ನು ಆಚರಣೆಗೆ ತಂದು ಸಮಾಜದಲ್ಲಿ ನಿರುದ್ಯೋಗದ ಸಮಸ್ಯೆಯು ಬಾರದಂತೆ ಎಲ್ಲರೂ ಸ್ವತಂತ್ರರಾಗಿ ಶೀಲವಂತರಾಗಿ ಬಾಳುವ ವ್ಯವಸ್ಥೆಯನ್ನು ಮಾಡಿದ ಕೀರ್ತಿಯೂ ಬಸವಣ್ಣನವರಿಗೆ ಸಲ್ಲುತ್ತದೆ. "ಕ್ರಿಯಾಜ್ಞಾನ ಸಮಾಯುಕ್ತಂ ವೀರಶೈವಸ್ಯ ಲಕ್ಷಣಂ" ಎಂಬ ಪ್ರಮಾಣದಂತೆ ಈ ಮತದಲ್ಲಿ ಕ್ರಿಯಾ ಜ್ಞಾನಗಳೆರಡಕ್ಕೂ ಪ್ರಾಮುಖ್ಯತೆ ಉಂಟು. ವಿಚಾರಪೂರಿತವಾದ ವೇದಾಂತ ತತ್ತ್ವಗಳೂ, ಅತಿಶಯವಾದ ಉಪಾಸನಾ ಭಕ್ತಿಯೂ ಇದರಲ್ಲಿ ಮಿಳಿತವಾಗಿರುವುವು. ಇದರಿಂದ ಬಸವಣ್ಣನವರಿಗೆ ಭಕ್ತಿ ಭಂಡಾರಿ ಎಂಬ ಹೆಸರು ಉಚಿತವಾಗಿ ಸಂದಿರುತ್ತದೆ.

## ದೇವರನಾಮಗಳು ಮತ್ತು ವಚನಗಳು

ಮೇಲೆ ವಿವರಿಸಿದ ವಿಷಯಗಳಿಂದ ಕರ್ನಾಟಕವು ಹೇಗೆ ಮತಧರ್ಮಗಳ ಪ್ರಚಾರದಲ್ಲಿ ಪ್ರಮುಖ್ಯ ಸ್ಥಾನವನ್ನು ಪಡೆದಿರುವುದೆಂಬುದು ವ್ಯಕ್ತವಾಗುತ್ತದೆ. ಆಚಾರ್ಯರುಗಳು ತಮ್ಮ ಸಿದ್ಧಾಂತಗಳನ್ನೂ, ವ್ಯಾಖ್ಯಾನಗಳನ್ನೂ ಸಂಸ್ಕೃತದಲ್ಲಿ ಬರೆದಿದ್ದುದರಿಂದ ಸಾಮಾನ್ಯ ಜನರಿಗೆ ಅವರು ಪ್ರತಿಪಾದಿಸಿದ ತತ್ತ್ವಗಳನ್ನು ಪರಿಚಯ ಮಾಡಿಕೊಳ್ಳುವುದು ಕಷ್ಟವಾಗಿತ್ತು. ಆ ಸಮಯದಲ್ಲಿ ಬಸವಣ್ಣನವರೂ, ಅಲ್ಲಮಪ್ರಭು, ಅಕ್ಕಮಹಾದೇವಿ ಮುಂತಾದ ಶಿವಶರಣ ಶರಣೆಯರೂ ಪುರಂದರದಾಸರು, ಕನಕದಾಸರು ಮುಂತಾದ ಭಾಗವತೋತ್ತಮರೂ, ವೇದೋಪನಿಷತ್ತುಗಳು ಮತ್ತು ಮತಸಿದ್ಧಾಂತ ಗ್ರಂಥಗಳು—ಅವುಗಳಲ್ಲಿ ಅಡಗಿದ್ದ ವೇದಾಂತ ರಹಸ್ಯಗಳನ್ನೂ, ಶುದ್ಧ ತತ್ತ್ವಗಳನ್ನೂ ಸರಳ ಕನ್ನಡದಲ್ಲಿ ಸಾಮಾನ್ಯ ಜನರಿಗೆ ಅನುಕೂಲವಾಗುವಂತೆ ಉಪದೇಶಿಸಿದರು. ಇದರ ಫಲವಾಗಿ ಕರ್ನಾಟಕದಲ್ಲಿ ಎಲ್ಲೆಲ್ಲೂ ಇವರ ವಚನಗಳೂ ದೇವರ ನಾಮಗಳೂ, ಮನೆ ಮಾತಾಗಿವೆ. ಇವುಗಳು ಜನಜೀವನದ ಮೇಲೆ ಒಂದು ಕ್ರಾಂತಿಕಾರಕವಾದ ಪರಿಣಾಮವನ್ನೇ ಉಂಟುಮಾಡಿವೆ. ಇದರಿಂದ ವೇದಾಂತತತ್ತ್ವಗಳು ಮನೆ ಮಾತಾಗಿ ಜನಸಾಮಾನ್ಯರಲ್ಲೂ ಶ್ರೇಷ್ಠವಾದ ಸಂಸ್ಕೃತಿಯು ಬೆಳೆಯಿತು. ಇದರ ಕ್ರಿಯಾತ್ಮಕ ಶಕ್ತಿಯು ಜನಜೀವನದಲ್ಲಿ ಪ್ರಗತಿಯನ್ನುಂಟು ಮಾಡಿತು. ವೇದಾಂತವು ತರ್ಕ ಪ್ರಧಾನವಾಗಿ ನಡೆಯುತ್ತಿದ್ದುದು ತತ್ತ್ವಪ್ರಧಾನವಾಯಿತು. ವಾಕ್ಚಾತುರ್ಯವು ಗೌಣವಾಯಿತು. ಧರ್ಮ ಸಮನ್ವಯದ ಕೆಳಗೆ ಜನರು ನಡೆಯಲು ಅನುಕೂಲವಾಯಿತು. ಶ್ರುತಿಗಳಲ್ಲಿ ಪ್ರತಿಪಾದಿತವಾಗಿದ್ದ ಒಂದೇ ಬ್ರಹ್ಮವಸ್ತು, ಒಬ್ಬನೇ ಈಶ್ವರ ಎಂಬ ಭಾವನೆಗಳು ಪುನಃ ಹೆಚ್ಚು ಪ್ರಚಾರಕ್ಕೆ ಬಂದು ನಿರ್ಮಲ ಜೀವನ, ಭೂತ ದಯೆ, ಪಶ್ಚಾತ್ತಾಪ ಇವುಗಳಿಗೆ ಪ್ರಾಧಾನ್ಯ ನೀಡುವಂತೆ ಆಯಿತು.

ಅದ್ವೇಷ್ಟಾ ಸರ್ವಭೂತಾನಾಂ
ಮೈತ್ರಃ ಕರುಣ ಏವಚ
ನಿರ್ಮಮೋ ನಿರಹಂಕಾರಃ
ಸುಖದುಃಖ ಸಮಕ್ಷಮೀ ॥

—ಎಂಬ ಗೀತಾ ಶ್ಲೋಕದ ಸಾರವು ಜನಜೀವನದಲ್ಲಿ ಹರಡುವಂತೆ ಆಯಿತು.

## ಮತಧರ್ಮಗಳ ಮತ್ತು ಸಮನ್ವಯ

ಮೇಲೆ ಸಂಕ್ಷೇಪವಾಗಿ ನಿರೂಪಿಸಿರುವ ಮತಧರ್ಮಗಳ ಕ್ರಿಯಾತ್ಮಕವಾದ ಬೆಳವಣಿಗೆಯಲ್ಲಿ ಸಮನ್ವಯದ ಪ್ರಯತ್ನಗಳು ಉದ್ದಕ್ಕೂ ಕಂಡು ಬರುತ್ತವೆ. ಮಧ್ಯೆ ವಿಷ್ಣು ದೊಡ್ಡವನು, ಶಿವನು ದೊಡ್ಡವನು ಎಂದು ಪಕ್ಷ— ಪ್ರತಿಪಕ್ಷಗಳು ಇರುತ್ತಿದ್ದರೂ, ನಿಜವಾದ ಜ್ಞಾನಿಗಳಲ್ಲಿ ಈ ಭೇದವು ಗೌಣವಾಗಿ, ಸಂಯಮ ದೃಷ್ಟಿಯೇ ಪ್ರಧಾನವಾಗಿತ್ತು. ಅಲ್ಲದೆ ಶಿವ — ಕೇಶವರಲ್ಲಿ ಅಭೇದವನ್ನು ಬೋಧಿಸುವ ಪ್ರಯತ್ನವೂ ಕರ್ನಾಟಕದಲ್ಲಿ ಸ್ಪಷ್ಟವಾಗಿ ಕಂಡುಬರುತ್ತವೆ.

"ಏಕೋ ದೇವ ಕೇಶವೋವಾ ಶಿವೋವಾ"

ಈ ಅಭೇದವನ್ನು ಸಾರಿದ್ದು ಸ್ಕಾಂದೋಪನಿಷತ್ತು. ಇದರ ದೊಡ್ಡ ಗುರುತು ಹರಿಹರ ಕ್ಷೇತ್ರದಲ್ಲಿ ಪ್ರತಿಷ್ಠಾಪನೆಯಾಗಿರುವ ಹರಿಹರೇಶ್ವರ.

ಆಧುನಿಕ ವಿದ್ಯಾಪ್ರಚಾರದಿಂದ ಕೇವಲ ಸಂಪ್ರದಾಯ ಶ್ರದ್ಧೆಯು ಕಡಿಮೆಯಾಗಿ ವಿಚಾರಪರತೆಯ ವೃದ್ಧಿಯಾಗುತ್ತಿರುವುದು ಈ ಸಂದರ್ಭದಲ್ಲಿ ಶುಭಲಕ್ಷಣವಾಗಿದೆ. ಇನ್ನು ಮುಂದೆ ಇದು ಭೇದರಹಿತ ಸಮಾಜವನ್ನು ಸ್ಥಾಪಿಸುವುದು ಸಹಾಯಕವಾಗುತ್ತದೆಂಬುದಕ್ಕೆ ಸೂಚನೆಯಾಗಿದೆ.

———

# ನಾಳೆ ಮಾಡುವುದನಿಂದೇ ಮಾಡಿ
# ಇಂದು ಮಾಡುವುದನೀಗಲೇ ಮಾಡಿ

( ಮಹಾಭಾರತ 12 – 6534 )

## ಕಾಲ ತರಂಗವಾರಿಗೂ ಕಾಯದು
## ಉಳಿತಾಯ ಮಾಡಲಿದುವೆ ಸುಸಮಯ

**ನಮ್ಮ ಬ್ಯಾಂಕ್‌ನ ಸುಪ್ರಸಿದ್ಧ ಬಹುಮುಖ ಉಳಿತಾಯ ಯೋಜನೆಗಳಲ್ಲಿ ತಮ್ಮ ಹಣವನ್ನು ಕೂಡಿಸಿರಿ.**

**ತಮ್ಮ ಅಗತ್ಯಗಳ ಪೂರೈಕೆಗೆ ಈ ಉಳಿತಾಯ ಬಳಕೆಗೆ ಬರುವಂತೆ ನಾವು ಮಾಡುತ್ತೇವೆ.**

ಹೆಚ್ಚಿನ ವಿವರಗಳಿಗಾಗಿ :

**ನಮ್ಮ ಯಾವುದೇ ಶಾಖೆಯನ್ನು ಸಂದರ್ಶಿಸಿ ಅಥವಾ ಬರೆಯಿರಿ.**

---

# ದಿ ಕರೂರ್ ವೈಶ್ಯ ಬ್ಯಾಂಕ್ ಲಿಮಿಟೆಡ್

ನೊಂದಾಯಿತ ಕೇಂದ್ರ ಕಚೇರಿ : ಜವಹರ್ ಬಜಾರ್,

## ಕರೂರ್ ೬೩೯೦೦೧

---



**ತಮ್ಮನ್ನು ಅಭಿವೃದ್ಧಿಯತ್ತ ಕರೆದೊಯ್ಯುವ ಬ್ಯಾಂಕ್**

ಜಿ. ವೆಂಕಟೇಶಂ,
ಛೇರ್ಮನ್.

# ಜಪಾನಿನಲ್ಲಿ ಹಿಂದೂ ದೇವಾಲಯಗಳು

ಜಪಾನಿನಲ್ಲಿ ಈಗಿರುವ ಬೌದ್ಧ ಮತಕ್ಕೂ ಹಿಂದೆ ಆ ದೇಶದ ಮುಖ್ಯ ಧರ್ಮ ಬ್ರಾಹ್ಮಣ ಒಕ್ಯ ( ಹಿಂದೂ ಧರ್ಮ ) ವಾಗಿತ್ತು. ನಂತರ ಚೀನಾ, ಕೊರಿಯಾದ ಮೂಲಕ ಬಂದ ಬೌದ್ಧ ಧರ್ಮ ಪ್ರಬಲ ವಾಯಿತು ಎಂದು ಇತಿಹಾಸ ಹೇಳುತ್ತಿದೆ. ಪ್ರಾಯಶಃ ಬ್ರಾಹ್ಮಣ ಧರ್ಮವೂ ಚೀನಾದ ಮೂಲಕವೇ ಜಪಾನಿಗೆ ಬಂದಿರಬೇಕು. ಅನೇಕ ಇತಿಹಾಸ ತಜ್ಞರ ಪ್ರಕಾರ ಜಪಾನಿನ ರಾಜರು ಭಾರತದ ಸೂರ್ಯವಂಶದ ಮೂಲದವರು. ಅನೇಕರು ಭಾವಿಸಿರು ವಂತೆ ಮಂಗೋಲ್ ಬುಡಕಟ್ಟಿನವರಲ್ಲ.

ಜಪಾನಿನ ಹಿಂದಿನ ರಾಜಧಾನಿ ನಾರ ದಲ್ಲಿರುವ ಬುದ್ಧ ದೇವಸ್ಥಾನದ ದ್ವಾರದಲ್ಲಿ ಶ್ರೀಕೃಷ್ಣ ಮುರಳಿಯನ್ನೂದುತ್ತಾ ನಿಂತಿರುವ ಪ್ರತಿಮೆಯಿದೆ. ಟೋಕಿಯೊದಿಂದ 15 ಮೈಲಿ ದೂರದಲ್ಲಿ ಆಕಾಶರಾಜ ಇಂದ್ರನ ದೇವ ಸ್ಥಾನವಿದೆ. ಹನುಮಾನನ ಎರಡು ವಿಗ್ರಹ ಗಳು ಮೂಲವಿಗ್ರಹದ ಎರಡು ಬದಿಯಲ್ಲಿವೆ. ಸರಸ್ವತಿ ( ಬೆನ್ ಟೇನ್ ಸಾಮ ) ದೇವ ಸ್ಥಾನ ನೂರಾರು ಯುವ ಪ್ರೇಮಿಗಳನ್ನು ಆಕರ್ಷಿಸುತ್ತದೆ. ಸಮುದ್ರ, ಸರೋವರ ತೀರಗಳಲ್ಲಿ ಆಕರ್ಷಣೀಯ ಸ್ಥಳಗಳಲ್ಲೆಲ್ಲಾ ಸರಸ್ವತಿಯ ದೇವಸ್ಥಾನಗಳಿವೆ. ಡೈಕೊಂಕು ( ಶಿವನ ಇನ್ನೊಂದು ಹೆಸರು ) ಸಾಮಾನ್ಯರ ಅಚ್ಚು ಮೆಚ್ಚಿನ ದೇವತೆ. ಫುಡೊ ಸಮಾಧಿ ಜನರ ಸ್ಥಿತಿಯಲ್ಲಿರುವ ದೇವ. ಅವನು ಶಿವನ ರೂಪದಲ್ಲಿ ಕೋರೈಸುವ ಮೂರ ನೆಯ ಕಣ್ಣು, ಕತ್ತಿ, ಹಾವುಗಳೊಂದಿಗೆ ಭಕ್ತರನ್ನು ಆಕರ್ಷಿಸುತ್ತಾನೆ. ಕೋಜಿನ್, ಭಯಂಕರ ರೂಪದ ಶಿವ. ತಲೆಬುರುಡೆಗಳ ಹಾರ, ಕೈ ಕಡಗಗಳಾಗಿ ಹಾವು, ಧ್ಯಾನ ಕ್ಕಾಗಿ ಹುಲಿಚರ್ಮ ಹೊಂದಿದ್ದಾನೆ.

ಎಲ್ಲಾ ಹಳ್ಳಿಗಳಲ್ಲಿ ಮೊದಲ ಪೂಜೆ ಆನೆ ಮುಖದ ವಿಘ್ನಗಳನ್ನು ತೊಡೆಯುವ ಗಣೇಶನಿಗೆ. ಬೇಸ್ತರ ಮೆಚ್ಚಿನ ದೈವ ಗಿಡುಗ ಮುಖದ ಗಂಧರ್ವ (ಕೊಂಪಿರ) ಸರ್ವಕ್ಕೂ ಅಧಿಪತಿಯಾಗಿ 'ಕಾಳಿಮಾತೆ,' 'ಕಾಡಿಮಾ' ವಾಗಿ ನಿತ್ಯ ಪೂಜೆ ಸ್ವೀಕರಿಸುತ್ತಾಳೆ.

ಯಮರಾಜ (ಎಮ್ಮಾ ಸಾಮ) ಅತಿ ಭಯವನ್ನು ಹುಟ್ಟಿಸುವ ದೇವ. ಅವನು ಚೈನಾ ಮುಕುಟ ಧರಿಸಿ, ಕೆಂಪು ಮುಖ, ಕೋಪಗೊಂಡ ಕಣ್ಣುಗಳನ್ನು ಹೊಂದಿ ದ್ದಾನೆ. ತಾಯಂದಿರು ಮಕ್ಕಳನ್ನು "ನೀ ಸುಳ್ಳು ಹೇಳಿದರೆ, ಎಮ್ಮಾ ನಿನ್ನ ನಾಲಿಗೆ ಕಿತ್ತು ಹಾಕುತ್ತಾನೆ" ಎಂದು ಹೆದರಿ ಸುತ್ತಾರೆ. ಸಾಮಾನ್ಯ ಜನ ಪೂಜಿಸುವ ಮತ್ತೊಂದು ದೇವ ಸೂಯಿ - ಟೆನ್ (ಮಳೆ - ನೀರಿನ ದೇವ) ವರುಣನ ಜಪಾನಿ ರೂಪ. ಸಂಸ್ಕೃತದಲ್ಲಿ ಗಂಗಾನದಿಯ ಮೊಸಳೆ (KUMBIRA) ಎಂದು ಹೆಸರು. ಜಪಾನಿನಲ್ಲಿ ಅದೂ ಸಹ ಪೂಜನೀಯ. ಕೊಟೊಹೀರ ದೇವಸ್ಥಾನದಲ್ಲಿ ಅದು 'ಕಾಂಪಿರ'ವಾಗಿದೆ.

ಜಪಾನಿನ ದೇವರುಗಳು ಸಂಸ್ಕೃತದ ಹೆಸರನ್ನೇ ಹೊಂದಿದ್ದಾರೆ. ಅಷ್ಟೇ ಸಂಖ್ಯೆಯ ಕೈಗಳನ್ನು, ಮುಖಗಳನ್ನು ಹೊಂದಿದ್ದಾರೆ. ಧರ್ಮಪದ ಜಪಾನಿನಲ್ಲಿ 'ದರುಮ' ವಾಗಿದೆ. ಜಪಾನಿನ ಶಿಂಟೊ ಧರ್ಮದಲ್ಲಿ ಕುಬೇರ ಬಹು ಜನ ಪ್ರಿಯ ದೇವನಾಗಿದ್ದಾನೆ.

ಕ್ಯೋಟೊ, ಟೋಕಿಯೊ, ಮೌಂಟ್ ಕೋಯಾ, ನಾರ ಇನ್ನೂ ಅನೇಕ ಸ್ಥಳಗಳಲ್ಲಿ ಬ್ರಹ್ಮ, ವಿಷ್ಣು, ಶಿವ, ಸೂರ್ಯರ ದೇವ ಸ್ಥಾನಗಳಿವೆ. ಕೋಯಾಸನ್ ನಗರದಲ್ಲಿ ಭಾರತದ ದೇವರುಗಳ ವಿಗ್ರಹಗಳ ಒಂದು ಅಪೂರ್ವ ವಸ್ತು ಸಂಗ್ರಹಾಲಯವಿದೆ.

ಸೂರ್ಯಾರಾಧನೆ ಸಹ ಜಪಾನಿನಲ್ಲಿ ಬಹು ಜನಪ್ರಿಯ. ಸೂರ್ಯ ಜನರಿಗೆ ಆಹಾರವನ್ನು ಒದಗಿಸುತ್ತಾನೆ. ಆದು ದರಿಂದ ಅವರು ಸೂರ್ಯನಿಗೆ ಚಿರಋಣಿ ಯಾಗಿದ್ದಾರೆ. ಗ್ರಾಮ ಪ್ರದೇಶಗಳಲ್ಲಿ ಸಂಪ್ರದಾಯಬದ್ಧ ವಯಸ್ಕರು ದಿನಾ ಬೇಗನೆ ಸೂರ್ಯನಿಗೆ ನಮಿಸುತ್ತಾರೆ. ಬೇಗನೆ ಎದ್ದು ಹೊರ ಬಂದು ಪೂರ್ವಕ್ಕೆ ಮುಖಮಾಡಿ ಸೂರ್ಯನಿಗೆ ತಲೆ ಬಾಗು ತ್ತಾರೆ. ಮಕ್ಕಳು ಆಹಾರ ಚೆಲ್ಲಿದರೆ ತಾಯಂದಿರು "ಆಹಾರ ಚೆಲ್ಲಿದರೆ, ನಿಮ್ಮನ್ನು ಸೂರ್ಯ ಶಿಕ್ಷಿಸುತ್ತಾನೆ" ಎನ್ನುತ್ತಾರೆ.

ಹಿಂದೂ ಸಂಪ್ರದಾಯದಲ್ಲಿ ಹಿರಿಯರ ಆರಾಧನೆ ಪ್ರಮುಖಸ್ಥಾನ ಕೊಡಲಾಗಿದೆ. 'ಶ್ರಾದ್ಧ' ಪದ್ಧತಿ ಅತಿ ಪುರಾತನ ಹಿಂದೂ ಸಂಪ್ರದಾಯವಾದದ್ದು. ಬೌದ್ಧ ಧರ್ಮ ಈ ಪದ್ಧತಿಯನ್ನು ಅಳವಡಿಸಿಕೊಂಡ ಕಾರಣ ಜಪಾನಿಯರು ಇದನ್ನು 'ಒಬನ್' ಎಂದು ಆಚರಿಸುತ್ತಾರೆ. ಒಬನ್ ಸಮಯ ದಲ್ಲಿ ಮನೆಯವರೆಲ್ಲಾ ಅಲಂಕರಿಸಲ್ಪಟ್ಟ ಹಿರಿಯರ ಗೋರಿಗಳಿಗೆ ಭೇಟಿ ನೀಡಿ ಸ್ವಲ್ಪ ಸಮಯ ಕಳೆಯುತ್ತಾರೆ. ಆತ್ಮ ಅವಿನಾಶಿ. ಎಂದೋ ಸತ್ತವರ ಆತ್ಮ ಮನೆಯಲ್ಲಿಯೇ 40 ದಿನ ಇರುವುದೆಂದು ಅವರು ನಂಬುತ್ತಾರೆ. ಅನೇಕರು ಆತ್ಮದೊಂದಿಗೆ ನಾವು ಮಾತ ನಾಡಬಲ್ಲೆವು ಎಂದೂ ಹೇಳುತ್ತಾರೆ.

ಜಪಾನಿಯರು ನಮ್ಮಂತೆ ತೀರ್ಥಯಾತ್ರೆ ಕೈಗೊಳ್ಳುತ್ತಾರೆ. ಜಪಾನಿನ ಕೈಲಾಸ ಪರ್ವತ ಮೌಂಟ್ ಫ್ಯೂಜಿ. 11,895 ಅಡಿ ಎತ್ತರದ ಈ ಪರ್ವತ ಜಪಾನಿನ ಅತೀ ಎತ್ತ ರದ್ದು ಹಾಗು ಪ್ರಸಿದ್ಧಿ ಹೊಂದಿರುವ ಪವಿತ್ರ ಪರ್ವತ. ನಾವು ರಾಮೇಶ್ವರ, ಕೈಲಾಸ ಪರ್ವತ ಅಥವ ಇತರೆ ದೇವಸ್ಥಾನ, ಪರ್ವತ ಗಳಿಗೆ ಭೇಟಿ ನೀಡಿದಾಗ ಬಡ ಬಗ್ಗರಿಗೆ ದಾನ ಮಾಡುವಂತೆ ಜಪಾನೀಯರು ದಾನ ಮಾಡುತ್ತಾರೆ. ಹಾಗೂ 'ಇದು ಮೋಕ್ಷಕ್ಕೆ ದಾರಿ' ಎಂದು ನಂಬುತ್ತಾರೆ. ಪವಿತ್ರ ಪರ್ವತದ ಮೇಲೆ ಮರಣ ಹೊಂದಿದರೆ ಅವರು 'ನಿರ್ವಾಣ' ಹೊಂದಬಹುದು ಎಂದು ನಂಬುತ್ತಾರೆ.

ಯುವಭಾರತಿಯಿಂದ ಕನ್ನಡಕ್ಕೆ
**ರಾ. ಮುರಳಿ.**

ಕೃತಿಯು ಗುಣಾವಗುಣ ಹಾಗೂ ಆದರ ಫಲಾಫಲಗಳು ಒಂದರಲ್ಲೊಂದು ಹಾಸು ಹೊಕ್ಕಾಗಿರುತ್ತವೆ. ಅವುಗಳಲ್ಲಿ ಪರಸ್ಪರ ಸಂಬಂಧವಿದೆಯಲ್ಲದೆ ಒಂದನ್ನೊಂದು ಅನುಸರಿಸುತ್ತವೆಂದೂ ಹೇಳಬಹುದು. ಈ ಮುಪ್ಪುರಿಯ ಬಂಧನದಲ್ಲಿ ಬಹುಪಾಲು ಮಾನವನ ದೃಷ್ಟಿ ಕೇವಲ ಫಲದ ಮೇಲೆಯೇ ಇರುತ್ತದೆ. ಮಾನವನು ಈ ನಿಸರ್ಗ ನಿಯಮವನ್ನು ಅಥವಾ ದೈವೀ ನಿರ್ಬಂಧನೆಯನ್ನು ವ್ಯತ್ಯಸ್ತಗೊಳಿಸಿ ಪಾರಾಗಲು ಪ್ರಯತ್ನಿಸಿ ಒಮ್ಮೊಮ್ಮೆ ಅದರಲ್ಲಿ ಯಶಸ್ವಿಯೂ ಆಗುತ್ತಾನೆ. ತನ್ನ ಬುದ್ಧಿಮತ್ತೆಯಿಂದಾಗಿ ಅವನು ದೈವವನ್ನೂ ವಂಚಿಸಲು ಪ್ರಯತ್ನಿಸುವಲ್ಲಿ ಒಮ್ಮೊಮ್ಮೆ ಸಫಲನಾದರೂ ಅದರ ಪರಿಣಾಮ ಮಾತ್ರ ಕ್ಷಣಭಂಗುರವಾಗಿರುವುದು ಅಥವಾ ಪ್ರತಿಕೂಲವಾಗಿರುವುದು.

# ಅಮರತ್ವ ಯಾರ ಪಾಲಿಗೆ

**ಶ್ರೀ ಎಸ್. ಜಯಸಿಂಹ**

“ಜಾತಸ್ಯ ಮರಣಂ ಧ್ರುವಂ”– ಹುಟ್ಟಿದವನು ಸಾಯಲೇಬೇಕು ಎಂದು ದಾರ್ಶನಿಕರುಗಳು ಹೇಳಿದ್ದಾರೆ, ಜೀವನದಲ್ಲಿ ನಿಶ್ಚಿತವಾದದ್ದೆಂದರೆ ಮರಣ ಮಾತ್ರ. ಆದರೂ ಸಾಮಾನ್ಯ ಮಾನವನ ದೃಷ್ಟಿಯಿಂದ ವಿಚಾರ ಮಾಡುವುದಾದರೆ ಮರಣವು ನಿಶ್ಚಯವೆಂದು ತಿಳಿದರೂ ಮರಣಕ್ಕೆ, ಅಂಜುತ್ತಾರೆ, ಇನ್ನೂ ಬದುಕಬೇಕೆಂಬ ಪ್ರವೃತ್ತಿಯನ್ನು ಪ್ರಬಲಿಸಿಕೊಳ್ಳುತ್ತಿದ್ದಾರೆ.

ಅಸುರರು ಅಮರರಾಗಲು ಸತತವಾಗಿ ವಿಶ್ವಪ್ರಯತ್ನ ಮಾಡಿದಂತೆ ಪುರಾಣಗಳಿಂದ ನಮಗೆ ಕಂಡು ಬರುತ್ತದೆ. ಶಕ್ತಿ, ಆರೋಗ್ಯ ಬುದ್ಧಿ ಮತ್ತು ಬೌದ್ಧಿಕಸಂಪತ್ತು ಹಾಗೂ ಕೆಲವು ವಿಶೇಷ ಶಕ್ತಿಗಳನ್ನು ಪಡೆದ ಅವರು ಅಮರತ್ವವನ್ನು ಪಡೆಯುವುದರಲ್ಲಿ ಮಾಡಿದ ಪ್ರಯತ್ನಗಳು ಅನ್ಯಾಯವೆಂದು ಹೇಳಲಾಗುವುದಿಲ್ಲ. ನಮಗೆ ತಿಳಿದು ಬರುವಂತೆ ಅವರು ಇದನ್ನು ಪಡೆಯುವ ದೃಷ್ಟಿಯಿಂದ ಬ್ರಹ್ಮ ಅಥವಾ ಈಶ್ವರನನ್ನೇ ಪ್ರಾರ್ಥಿಸಿದರು. ಅವರ ಮೊರೆ ಹೊಕ್ಕರು. ಪ್ರತ್ಯಕ್ಷಗೊಂಡ ದೇವತೆಗಳನ್ನು ಅವರು ಬೇಡಿದ ವರಗಳು, ಅವುಗಳಿಂದ ತಮಗಾಗಬೇಕಾದ ಕಲ್ಯಾಣ, ಅವರು ಹಾಕಿದ ಕರಾರುಗಳನ್ನು ನೋಡಿದಾಗ ಅವರ ಬುದ್ಧಿಮತ್ತೆಯ ಬಗ್ಗೆ ದಿಙ್ಮೂಢರಾಗುತ್ತೇವೆ. ಆದರೆ ಕೊನೆಗೆ ವಿಷ್ಣುವಿನ ರೂಪದಲ್ಲಿದ್ದ ದೇವಶ್ರೇಷ್ಠನು ಅನೇಕ ಪ್ರಸಂಗಗಳಲ್ಲಿ ಅವರ ಪ್ರಯತ್ನಗಳನ್ನು ಹಾಳು ಮಾಡಿ, ಯೋಗ್ಯ ಫಲವನ್ನು ಅವರು ಪಡೆಯುವಂತೆ ಮಾಡಿದ್ದಾನೆ.

ಅಮರತ್ವವನ್ನು ಪಡೆಯುವ ಪ್ರಯತ್ನಗಳ ದಾಖಲೆಗಳ ಪ್ರಕಾರ ಪ್ರಥಮವಾಗಿ ಅದು ನಡೆದುದು ದೇವಾಸುರರಿಂದ ನಡೆದ 'ಅಮೃತ ಮಂಥನ' ಪ್ರಸಂಗದಲ್ಲಿ. ಇಲ್ಲಿ ಮೇರು ಪರ್ವತವು ಕಡಗೋಲಾಗಿತ್ತು; ವಾಸುಕಿಯೇ ಹಗ್ಗವಾಗಿದ್ದನು. ಅಮೃತವು ಕಾಣಿಸಿಕೊಂಡಾಗ ಅದನ್ನು ಪಡೆದು ಕುಡಿಯುವುದಕ್ಕಾಗಿ ದೊಡ್ಡದೊಂದು ಗದ್ದಲವೇ ಎದ್ದಿತು. ಇಲ್ಲಿ ಸುರರು ಒಳ್ಳೆಯದರ ಪ್ರತೀಕವಾಗಿಯೂ, ಅಸುರರು ಕೆಡಕಿನ ಪ್ರತೀಕವಾಗಿಯೂ ಪರಿಗಣಿಸಲ್ಪಟ್ಟಿದ್ದಾರೆ. ಆಗ ಭಗವಾನ್ ವಿಷ್ಣುವು ಸುಂದರ ತರುಣಿಯ ರೂಪವನ್ನು ಧರಿಸಿ ಒಂದು, ಪಾತ್ರೆಯಲ್ಲಿ ಅಮೃತವನ್ನೆಲ್ಲ ಶೇಖರಿಸಿಕೊಂಡು, ತಾನು ಸರ್ವರಿಗೂ ಸಮಾನವಾಗಿ ಹಂಚುವೆನೆಂದು ಹೇಳಿದಾಗ 'ಅನುಪಮ ಸೌಂದರ್ಯ'ಕ್ಕೆ ಮರುಳಾದ ಎರಡೂ ಪಕ್ಷದವರು ಆ ಮಾತಿಗೆ ಒಪ್ಪಿ ಬೇರೆ ಬೇರೆಯಾಗಿ ಎರಡು ಸಾಲುಗಳಲ್ಲಿ ಕುಳಿತರು. ಸರತಿಯಂತೆ ಸುರಾಸುರರಲ್ಲಿ ಒಬ್ಬೊಬ್ಬರಂತೆ ಅಮೃತವನ್ನು ತರುಣಿಯು ಕೊಡುತ್ತಿದ್ದಾಗ ನಿಜವಾದ ಅಮೃತವು ಸುರರಿಗೆ ಮಾತ್ರ ಹೋಗುತ್ತಿರುವುದನ್ನು ಕಂಡು ಹಿಡಿದ ಅಸುರನೊಬ್ಬನು ಯಾರಿಗೂ ಗೊತ್ತಾಗದಂತೆ ಸುರರ ಸಾಲಿನಲ್ಲಿ ನುಸುಳಿಕೊಂಡು ಕುಳಿತನು, ಅಮೃತವನ್ನು ಸವಿದನು. ತಾನು ಮಾಡಿದ ತಪ್ಪು ತಿಳಿದಕೂಡಲೇ ತರುಣಿಯ ರೂಪದಲ್ಲಿದ್ದ ವಿಷ್ಣು ತನ್ನ ಸುದರ್ಶನ ಚಕ್ರದಿಂದ ಅಸುರನ ತಲೆಯನ್ನು ತೆಗೆಯುತ್ತಾನೆ. ಈಗಲೂ ಸಹ ರಾಹು ಮತ್ತು ಕೇತುಗಳೆಂಬ ಹೆಸರಿನಿಂದ ಆ ರುಂಡ-ಮುಂಡಗಳು ಅಮರತ್ವವನ್ನು ಪಡೆದಿವೆ.

ವಿಷ್ಣುವಿನ ಕೈಯಿಂದಲೇ ಮರಣ ಹೊಂದ ಬೇಕೆಂದು ಶಿಶುಪಾಲನ ವಿಧಿಲಿಖಿತವಿತ್ತು. ಅವನು ಅಧಿಕ ಕೈಗಳಿಂದ ಹಾಗೂ ಒಂದು ಅಧಿಕ ಕಣ್ಣುಳ್ಳವನಾಗಿ ಹುಟ್ಟಿದ್ದನು. ಭವಿಷ್ಯವಾಣಿಯ ಪ್ರಕಾರ ಯಾವಾತನ ತೊಡೆಯ ಮೇಲಿಟ್ಟಾಗ ಅವನ ಹೆಚ್ಚಿನ ಅಂಗಗಳು ಇಲ್ಲದಂತಾಗುವುವೋ ಆತನಿಂದಲೇ ಅವನ ಮರಣ ಸಂಭವಿಸುವುದೆಂದು ವಿದಿತವಾಗಿತ್ತು. ಶಿಶುಪಾಲನನ್ನು ಕೃಷ್ಣನ ತೊಡೆಯ ಮೇಲೆ ಇಟ್ಟಾಗ ಅದು ಸ್ವಾಭಾವಿಕ ಶಿಶುವಾಗಿ ಪರಿಣಮಿಸಿತು. ಕೃಷ್ಣನ ಸೋದರತ್ತೆಯಾದ ಶಿಶುಪಾಲನ ತಾಯಿಯು ಪುತ್ರವಾತ್ಸಲ್ಯದಿಂದಾಗಿ ಅವನ ನೂರು ತಪ್ಪುಗಳನ್ನು ಕ್ಷಮಿಸಬೇಕೆಂದು ಕೃಷ್ಣನಲ್ಲಿ ಪ್ರಾರ್ಥಿಸಿದಳು. ಕೃಷ್ಣನು ಇದಕ್ಕೆ ಸಮ್ಮತಿಸಿದನು. ನೂರೆನ್ನುವುದು ವಿಶೇಷಾರ್ಥವುಳ್ಳ ಸಂಖ್ಯೆಯೆಂದೇ ನಂಬಿದ ಆಕೆ ತನ್ನ ಮಗನನ್ನು ಬದುಕಿಸಿದೆನೆಂಬ ಸಂತೋಷದಲ್ಲಿ ಕಾಲ ಕಳೆಯುತ್ತಿದ್ದಳು. ಆದರೆ ಅಂದಿನಿಂದಲೇ ಕೃಷ್ಣನು ಶಿಶುಪಾಲನ ತಪ್ಪುಗಳನ್ನು ಎಣಿಸಲು ಆರಂಭಿಸಿ ನೂರೊಂದನೆಯ ತಪ್ಪು ಶಿಶುಪಾಲನಿಂದ ಸಂಭವಿಸಿದೊಡನೆ ಒಂದು ತಟ್ಟೆಯನ್ನು

( 37ನೇ ಪುಟ ನೋಡಿ )

## ಕಿಶೋರ ಜಗತ್

# ರಾಜಧರ್ಮ

—ರಘುಸುತ.



ಮುಂದೆ ಬ್ರಹ್ಮರ್ಷಿ ವಿಶ್ವಾಮಿತ್ರರು, ಹಿಂದೆ ಬಾಲಕರಾದ ಶ್ರೀರಾಮ,ಲಕ್ಷ್ಮಣರು. ವಯಸ್ಸಿಗೆ ಮೀರಿದ ದೈಹಿಕ ಬೆಳವಣಿಗೆ, ಮುಖಕಾಂತಿಗಳು ಅವರನ್ನು ವಯಸ್ಕರಂತೆ ತೋರಿಸುತ್ತಿದ್ದವು. ರಾಕ್ಷಸ ಸಂಹಾರಕ್ಕಾಗಿ ಗುರುಗಳನ್ನು ಆ ಧೀರ ಬಾಲಕರು ಹಿಂಬಾಲಿಸುತ್ತಿದ್ದರು. ರಾಜಗಾಂಭೀರ್ಯದ ನಡಿಗೆಯ ಆ ಬಾಲಕರು ಹೆಚ್ಚೂ ಕಡಿಮೆ ಒಂದೇ ವಯಸ್ಸಿನವರು. ಇಬ್ಬರಿಗೂ ಹನ್ನೆರಡು ವರ್ಷ. ಆದರೆ ದೇಹದಾರ್ಢ್ಯವು ವಯಸ್ಕರಿಗೆ ಸಮ.

ಸರಯೂ ನದಿಯನ್ನು ದಾಟಿ ಗಂಗಾ ತೀರಕ್ಕೆ ಬಂದರು. ಬಳಿಯಲ್ಲೇ ಮಲದ, ಕೂರಶ ದೇಶಗಳು. ಆದರೆ ಆ ಎರಡೂ ದೇಶಗಳು ಕ್ಷೀಣವಾಗುತ್ತಿವೆ. ಕಾರಣ, ರಾಕ್ಷಸಿಯಾದ ತಾಟಕೆಯ ಕಾಟ. ಸಾವಿರ ಆನೆಗಳ ಬಲವುಳ್ಳ ಆ ಯಕ್ಷ ಸ್ತ್ರೀಯು, ಶಾಪಗೊಂಡು, ರಾಕ್ಷಸಿಯಾಗಿ ಆ ರಾಜ್ಯಗಳನ್ನು ನಾಶಗೊಳಿಸಿದ್ದಳು. ರಾಮ, ಲಕ್ಷ್ಮಣರು ಮಾಡಬೇಕಾಗಿದ್ದ ಪವಿತ್ರ ಕಾರ್ಯಗಳಲ್ಲಿ ತಾಟಕಾ ಸಂಹಾರವೂ ಒಂದು. ಅದರ ಅಗತ್ಯವನ್ನು ವಿಶ್ವಾಮಿತ್ರರು ವಿವರಿಸಿದ್ದರು.

ರಾಮನು ತನ್ನ ಧನುಸ್ಸಿನ ಠೇಂಕಾರ ಮಾಡಿದನು. ಆ ಶಬ್ದದಿಂದ ತಾಟಕೆಯು ಕೋಪಗೊಂಡು, ರಾಮಲಕ್ಷ್ಮಣರ ಕಡೆಗೆ ಬಿರುಗಾಳಿಯಂತೆ ನುಗ್ಗಿ ಬಂದಳು. ಅವಳು ಬರುವ ರೀತಿಯನ್ನು ಕಂಡು ಭಯಪಡದ ರಾಮನು ಲಕ್ಷ್ಮಣನಿಗೆ ಹೀಗೆ ಹೇಳಿದನು :

'ಲಕ್ಷ್ಮಣ! ಹೆಂಗಸಾದರೂ ಈಕೆ ಎಷ್ಟು ಕ್ರೂರಳಾಗಿದ್ದಾಳೆ ನೋಡು! ಎಷ್ಟೇ ಆಗಲಿ ಈಕೆ ಹೆಣ್ಣು. ಸ್ತ್ರೀಯನ್ನು ವಧಿಸುವುದು ನಮಗೆ ಸಲ್ಲ! ಇಂತಹ ಸ್ತ್ರೀಯರಲ್ಲಿ ಮುಖ್ಯವಾಗಿರುವುದು ಶಕ್ತಿ. ಆದುದರಿಂದ ಅವಳಲ್ಲಿನ ಶಕ್ತಿ ಹಾಗೂ ಗಮನ ವೇಗವನ್ನು ಕಡಿಮೆ ಮಾಡಿದರೆ ಸಾಕು ... ಅವಳ ಕಿವಿ, ಮೂಗುಗಳನ್ನು ಕೊಯ್ದು ಹಾಕಿದರೆ ಹತೋಟಿಗೆ ಬರುವಳು ...'

ಹೀಗೆಂದು ಅವಳನ್ನು ಕೊಲ್ಲಲು ಇಷ್ಟಪಡದ ರಾಮನು ಅವಳ ಕೈಗಳನ್ನು ತನ್ನ ಬಾಣಗಳಿಂದ ಕತ್ತರಿಸಿದನು. ಲಕ್ಷ್ಮಣನು ತನ್ನ ಬಾಣಗಳಿಂದ ಅವಳ ಕಿವಿ, ಮೂಗುಗಳನ್ನು ಕೊಯ್ದು ಹಾಕಿದನು. (ಮುಂದೆ ಶೂರ್ಪನಖಿಗೂ ಇದೇ ಶಿಕ್ಷೆಯನ್ನು ಕೊಟ್ಟನು.) ಇದರಿಂದ ಆ ರಾಕ್ಷಸಿಯು ಉದ್ದೀಪ್ತಳಾಗಿ, ಮಾಯೆಯನ್ನು ನಿರ್ಮಿಸಿ, ಕಲ್ಮಳೆಯನ್ನು ಸುರಿಸತೊಡಗಿದಳು. ಒಂದೆರಡು ಗಳಿಗೆ ಅವರೆಲ್ಲರೂ ಈ ಹೊಡೆತದಿಂದ ದಿಗ್ಭ್ರಾಂತಗೊಂಡರು. ತಾಟಕೆಯು ತನ್ನ ಪ್ರಯೋಗಕ್ಕೆ ಸಂತೋಷಗೊಂಡು ಒಂದೆರಡು ಗಳಿಗೆ ಸ್ತಬ್ಧಳಾದಳು.

ಕೂಡಲೇ ರಾಮಲಕ್ಷ್ಮಣರು ಹಾಗೂ ವಿಶ್ವಾಮಿತ್ರರು ಚೇತರಿಸಿಕೊಂಡರು. ವಿಶ್ವಾಮಿತ್ರರು ಎಚ್ಚರಿಸಿದರು: 'ರಾಮ! ಇವಳಲ್ಲಿ ದಯೆ ಸಾಕು ಮಾಡು... ಇವಳನ್ನು ಸಂಹರಿಸುವ ಪ್ರಯತ್ನ ಮಾಡು ...'

ಆಗ ರಾಮನಲ್ಲಿ ಸಂಶಯ ತಲೆದೋರಿ, ಪ್ರಶ್ನಿಸಿದನು 'ಪೂಜ್ಯರೇ! ಸ್ತ್ರೀ ಹತ್ಯೆ ಮಹಾಪಾಪವಲ್ಲವೆ?'

ಉತ್ತಮಳಾಗಿರುವ ಸ್ತ್ರೀಯ ಹತ್ಯೆಯು ಮಹಾಪಾಪವೇ ಹೌದು. ಆದರೆ ಇವಳು ಪ್ರಜಾಪೀಡಕಳಾಗಿದ್ದಾಳೆ, ಲೋಕಕಂಟಕಳಾಗಿದ್ದಾಳೆ. ಅಲ್ಲದೆ ಇವಳು ಶಿಕ್ಷೆಗೆ ಬಗ್ಗುವವಳಲ್ಲ. ವಧಾರ್ಹಳು...'

'ಸ್ತ್ರೀವಧೆ ದೋಷಪೂರಿತ ಕಾರ್ಯವಲ್ಲವೆ?'

'ಸಾಮಾನ್ಯ ಅರ್ಥದಲ್ಲಿ ಅದು ಸರಿ ... ಆದರೆ ಪ್ರಜೆಗಳ, ಪ್ರಾಣಿಗಳ ಹಿತ ದೃಷ್ಟಿಯಿಂದ ಸ್ತ್ರೀವಧೆ ಮಾಡಬೇಕಾದರೂ, ಆ ಕಾರ್ಯವನ್ನು ಕೈಗೊಳ್ಳಲೇಬೇಕು. ರಾಜನಾದವನು ನಾಲ್ಕು ವರ್ಣಗಳ, ಸಕಲ ಜನರ ಕ್ಷೇಮ ಚಿಂತನೆಯನ್ನು ಮಾಡಬೇಕು. ಪ್ರಜಾರಕ್ಷಣೆಗಾಗಿ ಮಾಡಬೇಕಾದ ಎಲ್ಲ ಕಾರ್ಯಗಳನ್ನೂ ರಾಜನಾದವನು ಮಾಡಬೇಕು. ಆದಿಯಿಂದ ಬಂದಿರುವ ರಾಜಧರ್ಮವಿದು ...'

ರಾಮನು ಮಾತನಾಡದೆ ಸುಮ್ಮನಿದ್ದುದನ್ನು ಕಂಡು, ವಿಶ್ವಾಮಿತ್ರರು ಮುಂದುವರೆಸಿದರು: 'ಎಲೈ ರಾಮನೆ, ತಾಟಕೆ ಹೆಣ್ಣಲ್ಲ, ರಾಕ್ಷಸಿ. ಅವಳು ದುಷ್ಟಮೃಗದ ಸಮಾನ. ಅಧರ್ಮಾಲೋಚನೆಗಳಿಂದ ಕೂಡಿದ ಈ ರಕ್ಕಸಿಗೆ ಧರ್ಮವೆಂಬುದೇ ಇಲ್ಲ. ಧರ್ಮಾಧರ್ಮಗಳ ವಿವೇಚನೆಯೇ ಇವಳಲ್ಲಿ ಇಲ್ಲ ... ಹಳ್ಳಿಗೆ ನುಗ್ಗಿ ಬಂದು ದನಕರುಗಳನ್ನು ವಿನಾಕಾರಣ ಕೊಲ್ಲುವ ಚಿರತೆ, ತೋಳಗಳನ್ನು ಯಾವ ರೀತಿ ಕೊಲ್ಲಬೇಕೋ ಅದೇ ರೀತಿ ಇವಳನ್ನೂ ಕೊಲ್ಲಬೇಕಾದುದು ಧರ್ಮ...'

'ಹಿಂದೆಂದೂ ಈ ರೀತಿಯಲ್ಲಿ ಸ್ತ್ರೀವಧೆ ಮಾಡಿದುದನ್ನು ನಾನು ಕೇಳಿಲ್ಲ ...'

'ಉದಾಹರಣೆಗಳು ನಮ್ಮಲ್ಲಿ ಅನೇಕವಿವೆ. ಕೌಸಲ್ಯಾ ರಾಮ, ಹೇಳುವೆನು ಕೇಳು!... ಹಿಂದೆ ಭೂದೇವಿಯನ್ನು ಕೊಲ್ಲಬೇಕೆಂದು ವಿರೋಚನನ ಮಗಳಾದ ಮಂಥರೆಯು ಪ್ರಯತ್ನಿಸಿದಳು. ಆಗ ಇಂದ್ರನು

ಅವಳನ್ನು ಕೊಂದು ಲೋಕಕಂಟಕತ್ವವನ್ನು ದೂರಮಾಡಿದನು. ಭೃಗು ಮಹರ್ಷಿಯ ಪತ್ನಿಯಾದ ಖ್ಯಾತಿಯು ವ್ರತಗಳ ನಿಷ್ಠೆಯಿಂದ ಇದ್ದಂತಹವಳು. ಶುಕ್ರಾಚಾರ್ಯನಂತಹ ಜ್ಞಾನಿಯನ್ನು ಹೆತ್ತಾಕೆ. ಲೋಕದಲ್ಲಿ ಇಂದ್ರನೇ ಇಲ್ಲದಂತೆ ಮಾಡಬೇಕೆಂದು ಪ್ರಯತ್ನಿಸಿದಳು. ಆದರೆ ಮಹಾವಿಷ್ಣುವು ಅವಳನ್ನು ಸಂಹಾರ ಮಾಡಿದನು. ಹೀಗೆ ಅಧರ್ಮ ನಿರತರಾದ ಸ್ತ್ರೀಯರನ್ನು ರಾಜರು, ರಾಜಪುತ್ರರು ಸಂಹರಿಸಿದ್ದಾರೆ. ಮತ್ತೊಂದು ವಿಚಾರ...'

'ಏನು ಪೂಜ್ಯರೇ?'

'ಈಗ ಸಾಯಂಸಮಯ ಸನ್ನಿಹಿತವಾಗುತ್ತಿದೆ. ಈ ಗಳಿಗೆಯಲ್ಲಿ ಇವಳ ಸಂಹಾರವಾಗದಿದ್ದರೆ, ಸಂಧ್ಯಾಸಮಯದ ನಂತರ ಇಂತಹ ರಾಕ್ಷಸರನ್ನು ಎದುರಿಸುವುದು ಹರಿಹರ ಬ್ರಹ್ಮಾದಿಗಳಿಂದಲೂ ಸಾಧ್ಯವಿಲ್ಲ. ಎದುರು ಬಿದ್ದ ದುಷ್ಟ ಶತ್ರುವನ್ನು ಆದಷ್ಟು ಬೇಗ ಸಂಹರಿಸುವುದು ಕ್ಷತ್ರಿಯ ಧರ್ಮ. ಅದು ಅವರಿಗೆ ಉಚಿತವಾದುದೂ, ಭೂಷಣಪ್ರಾಯವಾದುದೂ ಆಗಿದೆ....'

ರಾಮನ ಮನಸ್ಸಿಗೆ ಅವನ ಜೀವನದ ಪ್ರಪ್ರಥಮ ರಾಜಧರ್ಮದ ತತ್ತ್ವೋಪದೇಶ ನಾಟಿತು. ತನ್ನ ಎದುರಿಗಿರುವ ಲೋಕ ಕಂಟಕ ದುಷ್ಟೆಯನ್ನು ನಿವಾರಿಸುವುದು ತನ್ನ ಕರ್ತವ್ಯವೆಂದರಿತನು. ಅವಳು ನಿರ್ಮಿಸಿದ್ದ ಮಾಯೆಯನ್ನು ಛಿದ್ರಮಾಡಿ, ಶಬ್ದವೇಧಿ ಬಾಣವನ್ನು ಅವಳೆಡೆಗೆ ಬಿಟ್ಟನು. ಸಿಡಿಲಿನ ವೇಗದ ಬಾಣವು ಅವಳ ಎದೆಗೆ ನಾಟಿತು. ಈ ಹೊಡೆತಕ್ಕೆ ತಾಟಕೆಯು ತತ್ತರಿಸಿ, ರಕ್ತಕಾರಿ, ಕೆಳಗೆ ಬಿದ್ದು ಪ್ರಾಣ ಬಿಟ್ಟಳು.

ರಾಮಾವತಾರ, ಕೃಷ್ಣಾವತಾರಗಳೆರಡೂ ಸ್ತ್ರೀಹತ್ಯೆಯಿಂದಲೇ ಪ್ರಾರಂಭವಾದುವು. ಸ್ತ್ರೀ ಅಂದರೆ ಮಾಯೆ. ಮಾಯೆಯ ಛಿದ್ರತೆಯು ಮುಖಾಂತರ ಅವತಾರ ಪ್ರಾರಂಭವಾಯಿತು.

---

## ನಂಬಿದೆ

ನಿನ್ನನೆ ನಂಬಿದ ದೀನನು ನಾನು
ಎನ್ನನು ಸಲಹುವ ದೇವನು ನೀನು ॥ ಪ ॥

ಬಣ್ಣದಿ ಬಂದು ಬಂಡಿಲಿ ನಿಂದೇ
ಭಕ್ತರನೆಲ್ಲಾ ಸಲಹಲು ಎಂದೇ
ಬೇಡಿದ ವರಗಳ ನೀಡುವ ತಂದೇ
ಬಂದಿಹೆ ನಿನ್ನಯ ದರುಶನಕೆಂದೇ ॥ ೧ ॥

ಕನಸಲು ಮನಸಲು ನಿನ್ನದೆ ಧ್ಯಾನ
ನಿನ್ನಯ ಸ್ಮರಣೆಯು ಅಮೃತಪಾನ
ಕಾಮಿತದಾಯಕ ಕರುಣಾಮೂರ್ತೇ
ಮಹಲಕ್ಷ್ಮೀಪುರದಾ ವೀರಾಂಜನೇಯನೆ ॥ ೨ ॥

—ಸೀತಾನಾರಾಯಣ್.

## ಶ್ರೀ ವೆಂಕಟೇಶ್ವರನಲ್ಲಿ ಅರಿಕೆ

ಪನ್ನಗಾಚಲವಾಸ ಶ್ರೀ ವೆಂಕಟೇಶ ॥ ಪ ॥

ಕಮಲಾಪತಿಯು ನೀನಾಗಿರುವೆ।
ಅಮಲಭಕ್ತಿಯ ನೀಡೆನಗೆ॥ ॥ ೧ ॥

ಸೃಷ್ಟಿಸ್ಥಿತಿಲಯ ಕಾರಣ ನೀನಾಗಿರುವೆ।
ಇಷ್ಟ ವರಗಳ ನೀಡೆನಗೆ॥ ॥ ೨ ॥

ಶರ್ವಾದಿ ವಂದ್ಯ ಚರಣನು ನೀನು।
ಗರ್ವಾಪಹರಣವ ಮಾಡೋ ನೀನು॥ ॥ ೩ ॥

ಶ್ರುತಿಸ್ಮೃತಿಗಳು ಸಂಸ್ತುತಿಗೈದಿವೆ ನಿನ್ನ।
ರತಿಯನೆ ಕೊಡು ನಿನ್ನ ಪಾದದಲೆನಗೆ ॥ ೪ ॥

ಘನ್ನ ಮಹಿಮನು ನೀನಾಗಿರುವೆ।
ಎನ್ನ ಭವ ಕಡೆಗಾಣಿಸೋ ನೀನು॥ ॥ ೫ ॥

ಅಕ್ಷರ ಪುರುಷನು ನೀನಹುದೋ।
ಈಕ್ಷಿಸಿ ರಕ್ಷಿಸು ನಿರುತದಿ ನೀನು॥ ॥ ೬ ॥

ಅಜರಾಮರಣನು ನೀನಹುದೋ।
ನಿಜ ರೂಪವ ತೋರೋ ಕರುಣದಲಿ॥ ॥ ೭ ॥

—ಶ್ರೀನಿವಾಸ ವ. ಠದ ಬಿ. ಎಸ್. ಸಿ.

ಯೋಗ ಮೀಮಾಂಸೆ

# ಸೂರ್ಯ ನಮಸ್ಕಾರ

"ಸೂರ್ಯ ನಮಸ್ಕಾರ" ವೆಂದ ಕೂಡಲೆ ಶ್ರೀ ಸಾಮಾನ್ಯನ ಮನದಲ್ಲಿ ಮೂಡುವ ಭಾವನೆಯೆಂದರೆ 'ಸೂರ್ಯನನ್ನು ಶ್ರದ್ಧಾ ಭಕ್ತಿಗಳಿಂದ ನಮಸ್ಕರಿಸುವುದು.' ವೈದಿಕರಾದರೆ 'ತೃಚಕಲ್ಪವೇ ಅಥವಾ ಅರುಣಪೂರ್ವಕವೇ?' ಎಂದು ಪ್ರಶ್ನಿಸುತ್ತಾರೆ. ಆದರೆ ಯೋಗಿಯೊಬ್ಬನ ದೃಷ್ಟಿಯಲ್ಲಿ ಈ ಸೂರ್ಯ ನಮಸ್ಕಾರಕ್ಕೆ ಒಂದು ವಿಶಿಷ್ಟ ಅರ್ಥವಿದೆ. ಇದು ಕೆಲವು ಅಮೂಲ್ಯ ಯೋಗಾಸನಗಳ ಸಂಯೋಜನೆಯಿಂದ ಕೂಡಿದೆ. ಇದನ್ನು 'ಸೂರ್ಯೋಪಾಸನೆ' ಎಂದೂ ಕರೆಯುತ್ತಾರೆ. 'ಉಪಾಸನೆ' ಎಂದರೆ ಹತ್ತಿರ ಕುಳಿತುಕೊಳ್ಳುವುದು, ಅಂದರೆ ನಾವು ಸೂರ್ಯದೇವನನ್ನು ಸಮೀಪಿಸುವುದು ಎಂದರ್ಥ. ತ್ರಿಮೂರ್ತಿ ಸ್ವರೂಪನೂ, ಅಂಧಕಾರ ನಿರೋಧಕನೂ, ಜ್ಯೋತಿರ್ಮಯನೂ ಆದ ಸೂರ್ಯನು ಉಪಾಸನೆಗೆ ಪ್ರತ್ಯಕ್ಷದೈವ.

## ವೇದೋಪನಿಷತ್ತುಗಳಲ್ಲಿ ಉಲ್ಲೇಖ

ಸೂರ್ಯೋಪಾಸನೆಯು ಇಂದು ನಿನ್ನೆಯದಲ್ಲ. ಇದಕ್ಕೆ ಕ್ರಿ.ಪೂ. ಮೂರುಸಾವಿರ ವರುಷಗಳ ಇತಿಹಾಸವಿದೆಯೆಂದು ತೋರುತ್ತದೆ. ವೇದಗಳಲ್ಲಿ ಸೂರ್ಯನಿಗೆ ಮಹತ್ತರ ಸ್ಥಾನವಿದೆ. ಸೂರ್ಯನು ಭಾಗ್ಯದಾಯಕನೆಂದೂ, ರೋಗಪರಿಹಾರಕನೆಂದೂ, ಜ್ಞಾನದಾತನೆಂದೂ ವೇದಗಳು ಹೊಗಳಿವೆ. ಉದಾಹರಣಾರ್ಥವಾಗಿ ಋಗ್ವೇದದಲ್ಲಿ, "ಆರೋಗ್ಯಂ ಭಾಸ್ಕರಾದಿಚ್ಛೇತ್" ಎಂದಿದೆ. ಅಂದರೆ ಆರೋಗ್ಯವನ್ನು ಸೂರ್ಯನಿಂದ ಪಡೆಯಬೇಕು. ಅಲ್ಲದೆ,

"ಸೂರ್ಯ ಆತ್ಮ ಜಗತಸ್ತಸ್ಥುಷಶ್ಚ" ಎಂದಿದ್ದಾರೆ. ಅಂದರೆ ಸಕಲ ಜಗತ್ತಿಗೂ ಸೂರ್ಯನೇ ಆತ್ಮನು. ಅಥರ್ವಣ ವೇದದಲ್ಲಿ,

"ಉದ್ಯನ್ನಾದಿತ್ಯಃ ಕ್ರಿಮೀನ್ ಹಂತಿ" ಎಂದಿದೆ, ಅಂದರೆ ಉದಯ ಕಾಲದ ಸೂರ್ಯನು ಕ್ರಿಮಿನಾಶಕನು. ಪ್ರಶ್ನೋಪನಿಷತ್ತಿನಲ್ಲಿ,

"ಪ್ರಾಣಃ ಪ್ರಜಾನಾಂ ಉದಯತಿ ಸೂರ್ಯಃ" ಎಂದು ಹೇಳಿದೆ, ಅಂದರೆ ಸೂರ್ಯೋದಯವು ಪ್ರಜೆಗಳ ಪ್ರಾಣವು. ಆದ್ದರಿಂದಲೇ ಸೂರ್ಯನನ್ನು 'ಮಿತ್ರ' ನೆಂದು ಸಂಬೋಧಿಸಿದ್ದಾರೆ. ಅಲ್ಲದೆ ನವ



ಗ್ರಹಗಳಲ್ಲಿ ಸೂರ್ಯನೇ ಪ್ರಧಾನ. ಎಲ್ಲಗ್ರಹಗಳೂ ಈತನ ಸುತ್ತಲೂ ತಿರುಗತ್ತವಾದ್ದರಿಂದ ವೇದದಲ್ಲಿ,

"ಮಧ್ಯೇವರ್ತುಳಮಾದಿತ್ಯಾಯ"

ಎಂದು ಸೂರ್ಯನಿಗೆ ವಿಶಿಷ್ಟಸ್ಥಾನವನ್ನು ಕೊಟ್ಟಿದ್ದಾರೆ. ಇಂತಹ ಅಗಣಿತ ಋಕ್ಕುಗಳನ್ನೂ, ಸೂಕ್ತಗಳನ್ನೂ ವೇದೋಪನಿಷತ್ತುಗಳ ತುಂಬ ನೋಡಬಹುದು.

ವೇದಗಳಲ್ಲಿರುವಂತೆಯೇ ಪುರಾಣಗಳಲ್ಲೂ ಸಹ ಸೂರ್ಯೋಪಾಸನೆಯ ಬಗ್ಗೆ ಅನೇಕ ಉಪಾಖ್ಯಾನಗಳಿವೆ. ಅವುಗಳಲ್ಲಿ ಕೆಲವನ್ನು ನೋಡೋಣ.

ಸ್ಕಾಂದ ಪುರಾಣದಲ್ಲಿ ಕುಷ್ಠರೋಗ ಪೀಡಿತನಾದ ಸಾಂಬನು ಪ್ರಭಾ ಕ್ಷೇತ್ರದಲ್ಲಿ ಸೂರ್ಯನನ್ನು ಕುರಿತು ಕಠಿಣವಾದ ತಪಸ್ಸನ್ನಾಚರಿಸಿ ಆತನನ್ನು ಪ್ರತ್ಯಕ್ಷ ಮಾಡಿಕೊಂಡು ರೋಗ ಮುಕ್ತನಾದನು.

ಚಿತ್ರ ಚಿತ್ರೆಯರೆಂಬ ಸೋದರ ಸೋದರಿಯರು ಸೂರ್ಯನನ್ನು ಆರಾಧಿಸಿ ಪೂರ್ಣಜ್ಞಾನವನ್ನು ಹೊಂದಿದರು.

ಮಹಾಭಾರತದಲ್ಲಿ ಧೌಮ್ಯ ಮಹರ್ಷಿಗಳಿಂದ ಸೂರ್ಯೋಪಾಸನೆಯ ಮಂತ್ರದ ಉಪದೇಶ ಪಡೆದ ಧರ್ಮರಾಯನು ಸೂರ್ಯನನ್ನಾರಾಧಿಸಿ ಅಮೂಲ್ಯವಾದ ಅಕ್ಷಯ ಪಾತ್ರೆಯನ್ನು ಪಡೆದನು.

ಭಾಗವತದಲ್ಲಿ ಸತ್ರಾಜಿತನೆಂಬ ರಾಜನು ಭಕ್ತಿಯಿಂದ ಸೂರ್ಯನನ್ನು ಸ್ತುತಿಸಿ ಆತನಿಂದ ಅಮೋಘವಾದ ಸ್ಯಮಂತಕ ಮಣಿಯನ್ನು ಪಡೆದನು.

ರಾಮಾಯಣದಲ್ಲಿ ಶ್ರೀರಾಮಚಂದ್ರನು ಅಗಸ್ತ್ಯಮುನಿಗಳಿಂದ ಉಪದೇಶಿಸಲ್ಪಟ್ಟ ಆದಿತ್ಯ ಹೃದಯ ಮಂತ್ರದ ಮಹಿಮೆಯಿಂದ ರವಿಯನ್ನಾರಾಧಿಸಿ ರಾವಣನನ್ನು ಸಂಹರಿಸಿದನು.

ಶ್ರೀರಾಮಚಂದ್ರನ ಮಗನಾದ ಕುಶನು ತನ್ನ ತಂದೆಯೊಡನೆ ಯುದ್ಧಮಾಡುವಾಗ ಮೇಲೆಸೆವ ರವಿಯನ್ನಾರಾಧಿಸಿ ಅಕ್ಷಯ ತೂಣೀರವನ್ನು ಪಡೆದನು.

## ರೋಗ ಚಿಕಿತ್ಸೆ

ಕೇವಲ ವೇದ ಪುರಾಣಗಳ ಉಲ್ಲೇಖಗಳಲ್ಲದೆ, ಈ ಶತಮಾನದಲ್ಲೂ ಸಹ ರೋಗ ಚಿಕಿತ್ಸೆಗಾಗಿ ಸೂರ್ಯರಶ್ಮಿಯನ್ನು, ವಿವಿಧರೀತಿಯಲ್ಲಿ ಬಳಸಿ


**ಶ್ರೀ ಕೆ. ಕೇಶವಮೂರ್ತಿ**

ಎಂ.ಎಸ್‌ಸಿ, ಎಂ.ಎ, ಎಂ.ಇಡಿ,


ಕೊಳ್ಳುತ್ತಿದ್ದಾರೆ. ಇವುಗಳಲ್ಲಿ 'ಸೂರ್ಯಸ್ನಾನ' ಮತ್ತು 'ವರ್ಣ ಚಿಕಿತ್ಸೆ' ಉಲ್ಲೇಖಾರ್ಹ. ಸೂರ್ಯಸ್ನಾನವೆಂದರೆ ಬೆಳಗಿನ ಬಿಸಿಲಿಗೆ ಬರಿಮೈಯನ್ನೊಡ್ಡುವುದು. ಇದರಿಂದ ಕ್ಷಯ.ರೋಗದ ಸೂಕ್ಷ್ಮ ಕ್ರಿಮಿಗಳೂ ಸಹ ನಾಶವಾಗುತ್ತವೆ. ಆದ್ದರಿಂದಲೇ ಪೂರ್ವಾಚಾರ್ಯರು, "ಆಯುರಾರೋಗ್ಯ ವೃದ್ಧ್ಯರ್ಥಂ ಸೂರ್ಯಸ್ನಾನಂ ಸಮಾಚರೇತ್" ಎಂದು ಹೇಳಿದ್ದಾರೆ.

'ವರ್ಣಚಿಕಿತ್ಸೆ'ಯಲ್ಲಿ ಎರಡು ಬಗೆ. ವಿವಿಧ ಬಣ್ಣದ ಸೀಸೆಗಳಲ್ಲಿ ಶುದ್ಧ ನೀರನ್ನು ತುಂಬಿ ಒಂದು ನಿರ್ದಿಷ್ಟ ವೇಳೆಯವರೆಗೆ ಅದನ್ನು ಬಿಸಿಲಿನಲ್ಲಿಟ್ಟು ಆ ನೀರನ್ನು ರೋಗಾನುಸಾರ ರೋಗಿಗೆ ಕುಡಿಸುವುದು ಒಂದು ಬಗೆ. ಇಲ್ಲಿ ಒಂದೊಂದು ಬಣ್ಣದ ಸೀಸೆಯ ನೀರು ಒಂದೊಂದು ರೋಗವನ್ನು ಗುಣಪಡಿಸುತ್ತದೆ.

## ಸಾಧಕರಿಗೆ ಕೆಲವು ಸಲಹೆಗಳು

1. ಸೂರ್ಯನಮಸ್ಕಾರವನ್ನು ಜಾತಿ ಮತ ಲಿಂಗ ವಯೋಧರ್ಮಗಳ ಭೇದವಿಲ್ಲದೆ ಯಾರು ಬೇಕಾದರೂ ಮಾಡಬಹುದು. 8 ವರ್ಷದಿಂದ 13 ವರ್ಷ ವಯಸ್ಸಿನ ಬಾಲಕರು ಪ್ರತಿದಿನವೂ 15 ರಿಂದ 50 ನಮಸ್ಕಾರಗಳನ್ನೂ 13 ವರ್ಷದಿಂದ ಮೇಲ್ಪಟ್ಟವರು 108 ನಮಸ್ಕಾರಗಳನ್ನು ಮಾಡಬಹುದು. ಬಾಲಕಿಯರೂ ಸ್ತ್ರೀಯರೂ 25 ರಿಂದ 50 ನಮಸ್ಕಾರಗಳನ್ನು ಮಾಡಿದರೂ ಸಾಕು. ಆದರೆ ಯಾರೂ ಶಕ್ತಿಮೀರಿ ಸೂರ್ಯನಮಸ್ಕಾರ ಮಾಡಬಾರದು. ಮೊದಲು ಕಡಿಮೆ ಸಂಖ್ಯೆಯಿಂದ ಪ್ರಾರಂಭಿಸಿ ದಿನಕ್ರಮೇಣ ಒಂದೊಂದಾಗಿಯೇ ಹೆಚ್ಚಿಸಬೇಕು. ಶೀತ ಕಾಲದಲ್ಲಿ ಸಂಖ್ಯೆಯನ್ನು ಹೆಚ್ಚಿಸಿ ಬೇಸಗೆಯಲ್ಲಿ ಮಿತಿಗೊಳಿಸಬಹುದು.

2. ಸಾಧಕನು ಅತಿಕಾಫಿ–ಚಹಾ ಸೇವನೆ, ಧೂಮಪಾನ, ತಂಗಳು, ಮಾದಕವಸ್ತುಗಳ ಸೇವನೆ, ಮಾಂಸಾಹಾರ, ಮೇಲಿಂದ ಮೇಲೆ ತಿನ್ನುವುದು, ಹಸಿವಿಲ್ಲದೆ ತಿನ್ನುವುದು ಇವುಗಳನ್ನು ವರ್ಜಿಸಬೇಕು.

3. ಸೂರ್ಯನಮಸ್ಕಾರವನ್ನು ಮಾಡಿದ ಒಂದು ಗಂಟೆಯ ನಂತರವೇ ಆಹಾರ ಸೇವಿಸಬೇಕು.

4. ಸೂರ್ಯನಮಸ್ಕಾರದ ನಂತರ ಬರುವ ಬೆವರನ್ನು ಶುದ್ಧವಾದ ಬಟ್ಟೆಯಿಂದ ಉಜ್ಜಿತೆಗೆಯ ಬೇಕು.

5. ಸೂರ್ಯನಮಸ್ಕಾರದ ನಂತರ ಅವಶ್ಯಕವಾಗಿ ಮೂತ್ರ ವಿಸರ್ಜನೆಯ ಮಾಡ ಬೇಕು. ಇದರಿಂದ ಶರೀರದಲ್ಲಿ ಉಂಟಾದ ಉಷ್ಣಾಂಶವು ಕಡಿಮೆಯಾಗುತ್ತದೆ.

6. ಸಾಧಕನಿಗೆ ಬ್ರಹ್ಮಚರ್ಯೆ ಅತಿಮುಖ್ಯ. ಅಂದರೆ ಗೃಹಸ್ಥರು ಸೂರ್ಯನಮಸ್ಕಾರವನ್ನು ಮಾಡಬಾರದೆಂಬುದು ಇದರರ್ಥವಲ್ಲ. ಸಾಧ್ಯವಾದಷ್ಟೂ ಸಂಯಮದಿಂದ ವರ್ತಿಸಬೇಕು. ಅಲ್ಲದೆ ರಾತ್ರಿ ವೀರ್ಯಸ್ಖಲನವಾಗಿದ್ದರೆ ಮೊದಲು ಸ್ನಾನಮಾಡಿ ನಂತರವೇ ಸೂರ್ಯನಮಸ್ಕಾರ ಮಾಡಬೇಕು.

7. ತೀರ ಹಸಿದಿರುವಾಗಲೂ, ದೀರ್ಘ ಉಪವಾಸದಲ್ಲಿರುವಾಗಲೂ, ಮನಸ್ಸು ಮ್ಲಾನವಾಗಿರುವಾಗಲೂ, ಸ್ತ್ರೀಯರು ರಜಸ್ವಲೆಯರಾಗಿರುವಾಗಲೂ ಸೂರ್ಯನಮಸ್ಕಾರವನ್ನು ಮಾಡಬಾರದು.

8. ಸೂರ್ಯನಮಸ್ಕಾರಕ್ಕೆ ಮೊದಲು ಅಥವಾ ನಂತರ ಗೊತ್ತಿದ್ದರೆ ಪ್ರಾಣಾಯಾಮ ಮಾಡುವುದು ಒಳ್ಳೆಯದು.

9. ಸೂರ್ಯನಮಸ್ಕಾರ ಮಾಡುವವರಿಗೆ 7 ರಿಂದ 8 ಘಂಟೆ ಕಾಲ ನಿದ್ರೆ ಬೇಕು.

ವಿವಿಧ ಬಣ್ಣದ ಗಾಜುಗಳ ಮೂಲಕ ಸೂರ್ಯರಶ್ಮಿಯನ್ನು ರೋಗಿಯ ಮೈಮೇಲೆ ಹಾಯಿಸಿ ಚಿಕಿತ್ಸೆ ನಡೆಸುವುದು ಮತ್ತೊಂದು ಬಗೆ. ಗಾಜಿನ ಬಣ್ಣಗಳು ರೋಗಕ್ಕೆ ಅನುಸಾರವಾಗಿರುತ್ತವೆ. ಅಂತೂ ಈ ಎರಡೂ ಚಿಕಿತ್ಸೆಗಳಲ್ಲಿ ಸೂರ್ಯರಶ್ಮಿಯೇ ಪ್ರಧಾನವಸ್ತು. ಕೇವಲ ಚಿಕಿತ್ಸೆಗೆ ಮಾತ್ರವಲ್ಲದೆ ವಿದೇಶಗಳಲ್ಲಿ ಸೂರ್ಯಸ್ನಾನವು ಸೌಂದರ್ಯಸಾಧನವಾಗಿದೆ. ಸೂರ್ಯರಶ್ಮಿಯಲ್ಲಿ 'ಡಿ' ಅನ್ನಾಂಗವಿರುವುದರಿಂದ ಇದು ದೇಹಕ್ಕೆ ಬೇಕಾದ ಅನೇಕ ಪೋಷಕಾಂಶಗಳನ್ನೊದಗಿಸುತ್ತದೆ.

ಆರೋಗ್ಯ ರಕ್ಷಣೆಗೆ ಮತ್ತು ಶಕ್ತಿ ಸಂಪಾದನೆಗೆ ಅಂಗಸಾಧನೆಯು ಅತಿ ಮುಖ್ಯವೆಂಬುದು ನಿರ್ವಿವಾದ. ಅಂಗಸಾಧನೆಯನ್ನು ಹಲವು ರೀತಿಯಲ್ಲಿ ಮಾಡಬಹುದು. ಅಂಗಸಾಧನೆಯ ಅಂಗವಾಗಿ ವ್ಯಾಯಾಮ ಶಾಲೆಗಳಿವೆ; ಗರಡಿಮನೆಗಳಿವೆ; ವಿವಿಧ ಆಟೋಟಗಳಿವೆ. ಅಲ್ಲದೆ ದೇಹ ಪರಿಶ್ರಮದ ಕಾರ್ಯಗಳಾದ ಸೌದೆ ಒಡೆಯುವುದು; ಬಟ್ಟೆ ಒಗೆಯುವುದು, ನೀರು ಎಳೆಯುವುದು–ಇವುಗಳಿಂದಲೂ ಸಹ ದೇಹಕ್ಕೆ ವ್ಯಾಯಾಮ ದೊರೆಯುತ್ತದೆ. ಆದರೆ ಇವೆಲ್ಲವೂ ಕೇವಲ ಭೌತಿಕ ಪ್ರಕ್ರಿಯೆಗಳು, ಇವುಗಳಿಂದ ದೇಹಕ್ಕೆ ವ್ಯಾಯಾಮವು ದೊರೆಯಬಹುದಾದರೂ, ಮಾನಸಿಕ ಶಕ್ತಿ ಸಂವರ್ಧನೆ ಸಾಧ್ಯವಿಲ್ಲ. ವ್ಯಕ್ತಿಯೊಬ್ಬನು ಪರಿಪೂರ್ಣ ಆರೋಗ್ಯವಂತನೆಂದು ಹೇಳಬೇಕಾದರೆ ಆತನಲ್ಲಿ ದೇಹಸ್ವಾಸ್ಥ್ಯ ಮತ್ತು ಮನಸ್ಸ್ವಾಸ್ಥ್ಯಗಳೆರಡೂ ಇರಬೇಕು. ಇವು ಒಂದಕ್ಕೊಂದು ಪೂರಕ. ಆದ್ದರಿಂದಲೇ ಶಿಕ್ಷಣ ತಜ್ಞರು ಶೈಕ್ಷಣಿಕ ಪ್ರಗತಿಗೆ "A sound body in a sound mind" ಅಗತ್ಯವೆಂದು ಹೇಳಿದ್ದಾರೆ. ಸೂರ್ಯನಮಸ್ಕಾರದಿಂದ ಶರೀರದ ಅಂಗುಷ್ಠದಿಂದ ಹಿಡಿದು ಶಿರಸ್ಸಿನವರೆಗೆ ಪ್ರತಿಯೊಂದು ಅಂಗಕ್ಕೂ ವ್ಯಾಯಾಮವು ದೊರೆಯುತ್ತದೆ. ಅಲ್ಲದೆ ಉದಯಿಸಿ ಬರುತ್ತಿರುವ ಸೂರ್ಯದೇವನ ಮುಂದೆ ನಿಂತು ಬೀಜಾಕ್ಷರ ಪೂರ್ವಕವಾದ ಸೂರ್ಯ ಮಂತ್ರವನ್ನು ಪಠಿಸುವುದರಿಂದ ಮಾನಸಿಕ ಶಕ್ತಿ ಸಂವರ್ಧನೆಯಾಗುತ್ತದೆ.

ಸೂರ್ಯನಮಸ್ಕಾರಕ್ಕೆ ಪ್ರಾತಃಕಾಲವೇ ಅತಿಯೋಗ್ಯವಾದ ಕಾಲ. ಶೌಚಾದಿಗಳನ್ನು ನಿರ್ವರ್ತಿಸಿದನಂತರ ಬಿಡಿಹೊಟ್ಟೆಯಲ್ಲಿ ನಮಸ್ಕಾರವನ್ನು ಪ್ರಾರಂಭಿಸಬೇಕು. ಸೂರ್ಯನಮಸ್ಕಾರವನ್ನು ಉಪಾಸನಾದೃಷ್ಟಿಯಿಂದ ಮಾಡುವವರು ಸ್ನಾನದ ಬಳಿಕವೇ ಮಾಡಬೇಕು. ದೇಹಸ್ವಾಸ್ಥ್ಯದ ದೃಷ್ಟಿಯಿಂದ ಮಾಡುವವರು ನಮಸ್ಕಾರದ ನಂತರ ಬಿಸಿನೀರಿನ ಸ್ನಾನ ಮಾಡಬಹುದು. ಆದರೆ ತಣ್ಣೀರಿನಲ್ಲಿ ಸ್ನಾನಮಾಡುವವರು ನಮಸ್ಕಾರದಿಂದುಂಟಾದ ದೇಹದ ಕಾವು ಆರುವವರೆಗೂ ಇದ್ದು ನಂತರ ಸ್ನಾನ ಮಾಡಬೇಕು. ತಣ್ಣೀರಿನ ಸ್ನಾನ ಉತ್ತಮ. ತಣ್ಣೀರು ಒಗ್ಗದವರು ಬಿಸಿನೀರಿನಲ್ಲಿ ಸ್ನಾನಮಾಡಲು ಅಭ್ಯಂತರವಿಲ್ಲ.

ನಮಸ್ಕಾರದ ಕಾಲದಲ್ಲಿ ದೇಹದ ಮೇಲೆ ಕಡಿಮೆ ಬಟ್ಟೆಯಿರಬೇಕು. ಹನುಮಾನ್‌ಕಾಚ ಉತ್ತಮ. ಹೆಚ್ಚಿನ ಬಟ್ಟೆ ಇದ್ದರೆ ಚಲನವಲನಕ್ಕೆ ಅಡಚಣೆಯನ್ನುಂಟು ಮಾಡುತ್ತದೆ. ಸೂರ್ಯನಮಸ್ಕಾರ ಮಾಡುವ ಸ್ಥಳವು ಶುಚಿರ್ಭೂತವಾಗಿದ್ದು ಏಕಾಗ್ರತೆಗೆ ಭಂಗವಂತರುವಂತಹ ಯಾವ ಚಿತ್ರಪಟಗಳಾಗಲಿ ಅಥವಾ ಕರ್ಕಶ ಶಬ್ದಗಳಾಗಲಿ ಇರಕೂಡದು. ನೆಲವು ಸಮತಟ್ಟಾಗಿದ್ದು ಗಾಳಿ ಬೆಳಕು ಸಲೀಸಾಗಿ ಬರುವಂತಿರಬೇಕು. ಬಯಲಿನಲ್ಲಾಗಲಿ ಅಥವಾ ಮನೆಯ ಒಳಭಾಗದಲ್ಲಾಗಲಿ ಮಾಡಬಹುದು. ಬಯಲಿನಲ್ಲಿ ಮಾಡ ಬೇಕಾದಾಗ ಬಿರುಸಾದ ಗಾಳಿ ಅಥವಾ ತುಂತುರುಮಳೆ ಇರಕೂಡದು.

ಇಂತಹ ಶುಚಿರ್ಭೂತ ಸ್ಥಳದಲ್ಲಿ ಒಂದು ಹತ್ತಿಯ ಇಲ್ಲದೆ ಉಣ್ಣೆಯ ಟವಲನ್ನು ಉದಯಿಸಿ ಬರುತ್ತಿರುವ ಸೂರ್ಯನೆದುರು ಹಾಸಬೇಕು. ಈ ಟವಲನ್ನು ಹಾಸುವಲ್ಲಿ ಎರಡು ಉದ್ದೇಶಗಳಿವೆ. ಮೊದಲನೆಯದು ಹಸ್ತಪಾದಾಸನದಲ್ಲಿನ ಎರಡು ಹಸ್ತಗಳ ನಡುವಣ ಅಂತರ ಅವರವರ ಕೈಲಿ ಒಂದು ಮೊಳವಿರಬೇಕೆಂಬುದು. ಇದು ಅತಿಮುಖ್ಯ ಕಾರಣ. ಅಳತೆ ಹೆಚ್ಚುಕಡಿಮೆಯಾದರೆ ದುಷ್ಪರಿಣಾಮಗಳಾಗುವ ಸಾಧ್ಯತೆ ಇದೆ. ಸಾಷ್ಟಾಂಗ

ಪ್ರಣಿಪಾತಾಸನ ಮಾಡುವಾಗ ನೆಲದಲ್ಲಿನ ಧೂಳು ಮೂಗಿಗೆ ಹೋಗಬಾರದೆಂಬುದು ಎರಡನೆಯ ಉದ್ದೇಶ. ಈ ರೀತಿ ಹಾಸಿದ ಟವಲಿನ ಅಂಚಿನ ಮೇಲೆ ಜೋಡಿಸಿದ ಪಾದಗಳ ಹೆಬ್ಬೆರಳುಗಳು ಬರುವಂತೆ ಸಮಸ್ಥಿತಿಯಲ್ಲಿ ನಿಂತುಕೊಳ್ಳಬೇಕು. ಉದಯಿಸಿ ಬರುತ್ತಿರುವ ಭಾನುವನ್ನು ಮನಸ್ಸಿನಲ್ಲಿ ಪ್ರತಿಷ್ಠಿಸಿಕೊಳ್ಳಬೇಕು. ಇಲ್ಲವೇ ಉದಯ ಭಾನುವಿನ ಚಿತ್ರವೊಂದನ್ನು ಮುಂಭಾಗದಲ್ಲಿ ಇಟ್ಟುಕೊಳ್ಳಬಹುದು. ಇವುಗಳ ಬದಲು ಸೂರ್ಯೋದಯ ವಾಗುತ್ತಿರುವಾಗಲೇ ನಮಸ್ಕಾರ ಮಾಡುವುದು ಅತಿಶ್ರೇಷ್ಠ. ಬಿಸಿಲಿಗೆ ಮೈಯೊಡ್ಡಿ ನಮಸ್ಕರಿಸುವುದರಿಂದ ಸೂರ್ಯಸ್ನಾನವೂ ಆದಂತಾಗುತ್ತದೆ.

ಸೂರ್ಯನಮಸ್ಕಾರವು ಹಲವು ಯೋಗಾಸನಗಳ ಸಂಯೋಜನೆಯಿಂದ ಕೂಡಿದೆ. ಅವುಗಳಲ್ಲಿ ಮೊದಲ 8 ಆಸನಗಳು ಆರೋಹಣಕ್ರಮದಲ್ಲಿಯೂ ಉಳಿದ 4 ಆಸನಗಳು ಅವರೋಹಣ ಕ್ರಮದಲ್ಲಿಯೂ ಯೋಜಿತವಾಗಿದೆ (ಪಕ್ಕದ ಅಂಕಣ ನೋಡಿ.)

ಈ ಆಸನಗಳನ್ನು ಹಾಕುವಾಗ ಕ್ರಮಬದ್ಧವಾದ ಶ್ವಾಸಕ್ರಮವು ಅತಿಮುಖ್ಯ. ಶ್ವಾಸೋಚ್ಛ್ವಾಸವು ಪೂರಕ – ಕುಂಭಕ – ರೇಚಕಗಳಿಂದ ಕೂಡಿರಬೇಕು. ಪೂರಕವೆಂದರೆ ಉಚ್ಛ್ವಾಸ. ಕುಂಭಕ–ವೆಂದರೆ ಉಚ್ಛ್ವಾಸ ಮಾಡಿದ ವಾಯುವನ್ನು ಒಳಗೆ ತಡೆಹಿಡಿಯುವುದು. ರೇಚಕವೆಂದರೆ ನಿಃಶ್ವಾಸ.

ಪ್ರತಿಯೊಂದು ಆಸನಕ್ಕೂ ಶ್ವಾಸಕ್ರಮವನ್ನು ಹೇಳಿದೆಯಷ್ಟೆ. ಆದರೆ ಸಾಧಕನು ಇದನ್ನೇ ಅನುಸರಿಸಬೇಕೆಂಬ ಕಡ್ಡಾಯವೇನೂ ಇಲ್ಲ. ಹೆಚ್ಚಿಗೆ ನಮಸ್ಕಾರ ಮಾಡುವವರು ಚುರುಕಾಗಿ ಮಾಡಬೇಕಾಗುತ್ತದೆ. ಆಗ ಸಹಜವಾಗಿ ಶ್ವಾಸೋಚ್ಛ್ವಾಸಗಳು ನಡೆಯುತ್ತಿದ್ದರೆ ಸಾಕು. ಅದರಿಂದ ಯಾವ ತೊಂದರೆಯೂ ಇಲ್ಲ. ಆದರೆ ಪ್ರಾರಂಭದಿಶೆಯಲ್ಲಿ ಶ್ವಾಸೋಚ್ಛ್ವಾಸದ ನಿಯಮವನ್ನು ಪಾಲಿಸುವುದು ಒಳ್ಳೆಯದು. ಆದರೆ ಬಾಯಿಯಿಂದ ಉಸಿರಾಡದೆ ಮೂಗಿನಿಂದಲೇ ಉಸಿರಾಡಬೇಕು.

ಸೂರ್ಯನಮಸ್ಕಾರದ ಎಲ್ಲಾ ಆಸನಗಳನ್ನೂ ಮತ್ತು ಶ್ವಾಸಕ್ರಮವನ್ನೂ ಹೀಗೆ ಪಟ್ಟಿ ಮಾಡಬಹುದು-

| | | |
|---|---|---|
| 1. | ನಮಸ್ಕಾರಾಸನ | ಪೂರಕ |
| 2. | ಊರ್ಧ್ವಾಸನ | ಪೂರಕ–ಕುಂಭಕ |
| 3. | ಹಸ್ತಪಾದಾಸನ | ರೇಚಕ |
| 4. | ಏಕಪಾದ ಪ್ರಸರಣಾಸನ | ಪೂರಕ |
| 5. | ದ್ವಿಪಾದ ಪ್ರಸರಣಾಸನ | ಪೂರಕ–ಕುಂಭಕ |
| 6. | ಭೂಧರಾಸನ | ರೇಚಕ |
| 7. | ಸಾಷ್ಟಾಂಗ ಪ್ರಣಿಪಾತಾಸನ | ಪೂರಕ |
| 8. | ಭುಜಂಗಾಸನ | ಕುಂಭಕ |
| 9. | ಭೂಧರಾಸನ | ರೇಚಕ |
| 10. | ಏಕಪಾದ ಪ್ರಸರಣಾಸನ | ಪೂರಕ |
| 11. | ಹಸ್ತ ಪಾದಾಸನ | ರೇಚಕ |
| 12. | ನಮಸ್ಕಾರಾಸನ | ಪೂರಕ |
| 13. | ಸಮಸ್ಥಿತಿ | ರೇಚಕ |

## ಸೂರ್ಯಮಂತ್ರ

ಪ್ರತಿಯೊಂದು ನಮಸ್ಕಾರವನ್ನು ಮಾಡುತ್ತಲೇ ಸೂರ್ಯದೇವನ ಒಂದೊಂದು ನಾಮವನ್ನು ಉಚ್ಚರಿಸಬೇಕು. ಈ ಸಂದರ್ಭದಲ್ಲಿ ಸೂರ್ಯನ ದ್ವಾದಶನಾಮವನ್ನಾಗಲೀ ಏಕವಿಂಶತಿಯನ್ನಾಗಲೀ, ಅಷ್ಟೋತ್ತರನಾಮವನ್ನಾಗಲೀ ಬಳಸಿಕೊಳ್ಳಬಹುದು ಇದು. ಲೆಕ್ಕಾಚಾರಕ್ಕೂ ಅನುಕೂಲವಾಗಿದೆ. ಎಲ್ಲ ನಮಸ್ಕಾರಗಳೂ ಮುಗಿದನಂತರ "ಓಂ ಶ್ರೀ ಸವಿತೃಸೂರ್ಯನಾರಾಯಣಾಯನಮಃ" ಎಂದು ಹೇಳಿ ಮತ್ತೊಂದು ನಮಸ್ಕಾರ ಮಾಡಬೇಕು. ಈ ಕೆಳಗೆ ಸೂರ್ಯನ ದ್ವಾದಶನಾಮಗಳನ್ನು ಕೊಟ್ಟಿದೆ. ಹೆಚ್ಚು ನಮಸ್ಕಾರಗಳನ್ನು ಮಾಡುವವರು ಇದನ್ನೇ ಪುನರಾವರ್ತಿಸಬಹುದು.

ಓಂ ಮಿತ್ರಾಯ ನಮಃ
ಓಂ ರವಯೇ ನಮಃ
ಓಂ ಸೂರ್ಯಾಯ ನಮಃ
ಓಂ ಭಾನವೇ ನಮಃ
ಓಂ ಖಗಾಯ ನಮಃ
ಓಂ ಪೂಷ್ಣೇ ನಮಃ
ಓಂ ಹಿರಣ್ಯಗರ್ಭಾಯ ನಮಃ
ಓಂ ಮರೀಚಯೇ ನಮಃ
ಓಂ ಆದಿತ್ಯಾಯ ನಮಃ
ಓಂ ಸವಿತ್ರೇ ನಮಃ
ಓಂ ಅರ್ಕಾಯ ನಮಃ
ಓಂ ಭಾಸ್ಕರಾಯ ನಮಃ
ಓಂ ಶ್ರೀ ಸವಿತೃ ಸೂರ್ಯ ನಾರಾಯಣಾಯ ನಮಃ

ಸ್ಥೂಲ ಶರೀರಿಗಳು ತಮ್ಮ ದೇಹದ ತೂಕವನ್ನು ಇಳಿಸಿ ಕೊಳ್ಳಬೇಕೆಂದಿದ್ದರೆ ಒಂದು ಕಪ್ಪು ನೀರಿಗೆ ಸ್ವಲ್ಪ ಜೇನು ಸೇರಿಸಿ ಸೇವಿಸಿದ ಅರ್ಧ ಗಂಟೆಯ ನಂತರ ಸೂರ್ಯನಮಸ್ಕಾರವನ್ನು ಪ್ರಾರಂಭಿಸಬೇಕು.

ದೇಹದ ತೂಕವನ್ನು ಹೆಚ್ಚಿಸಿಕೊಳ್ಳಲು ಹಾಗೂ

## ಎಚ್ಚರಿಕೆ

ಇಷ್ಟೆಲ್ಲಾ ಹೇಳಿದ ಮೇಲೆ ಒಂದು ಎಚ್ಚರಿಕೆಯ ಮಾತು ಅತ್ಯಗತ್ಯ. ಈ ಲೇಖನವು ಸೂರ್ಯೋಪಾಸನೆಯಲ್ಲಿ ತಮ್ಮ ಆಸಕ್ತಿಯನ್ನು ಕೆರಳಿಸಲು ಬರೆದುದೇ ಹೊರತು ಇದನ್ನೇ ಸಾಧನೆಯ ಕೈಪಿಡಿಯನ್ನಾಗಿ ಉಪಯೋಗಿಸುವುದಕ್ಕಾಗಿ ಅಲ್ಲ. ಇಲ್ಲಿ ಯಾವ ಆಸನವನ್ನು ಹೇಗೆ ಮಾಡಬೇಕೆಂಬ ವಿವರಣೆ ಇಲ್ಲ. ಅಂತಹ ಒಂದು ವಿವರಣೆ ಈ ಲೇಖನದ ವ್ಯಾಪ್ತಿಗೆ ಮೀರಿದುದು. ಆದುದರಿಂದ ಸಾಧಕನು ಅರಿಷಡ್ವರ್ಗಗಳಿಂದ ಮುಕ್ತನಾದ ಗುರುವನ್ನು ಆಶ್ರಯಿಸಿ ಆತನ ಸಾನ್ನಿಧ್ಯದಲ್ಲಿ ಅಭ್ಯಾಸಮಾಡಬೇಕು. ಹಾಗಲ್ಲದೆ ಈ ಲೇಖನವನ್ನೋದಿ ಪ್ರಚೋದಿತರಾಗಿ ಅಭ್ಯಾಸವನ್ನು ಪ್ರಾರಂಭಿಸಿದರೆ ಅಪಾಯ ಕಟ್ಟಿಟ್ಟಬುತ್ತಿ. ಗುರುವಿನ ಅನುಮತಿ ದೊರೆತ ನಂತರ ಸಾಧಕನು ಸ್ವತಂತ್ರವಾಗಿ ಅಭ್ಯಸಿಸಬಹುದು.

ದೇಹ ಪುಷ್ಟಿಯನ್ನು ಅಪೇಕ್ಷಿಸುವವರು ತುಪ್ಪದ ಜತೆಗೆ ಸಕ್ಕರೆ ಸೇರಿಸಿ ತಿಂದು ಒಂದು 'ಬಟ್ಟಲು ಹಾಲು ಕುಡಿದು 20 ನಿಮಿಷಗಳ ನಂತರ ನಮಸ್ಕಾರ ಪ್ರಾರಂಭಿಸಬೇಕು.

ವಾಯುರೋಗದವರು ಒಂದು ಲೋಟ ಬಿಸಿ ನೀರು ಕುಡಿದು ಅರ್ಧತಾಸು ಬಿಟ್ಟು ನಮಸ್ಕಾರ ಮಾಡಿದರೆ ವಾಯುರೋಗವು ನಿವಾರಣೆಯಾಗುತ್ತದೆ.

ಕಫರೋಗಿಗಳು ಸ್ವಲ್ಪ ಜೇನಿನಲ್ಲಿ ಹಿಪ್ಪಲಿ ಪುಡಿಯನ್ನು ಸೇರಿಸಿ ತಿಂದು ನಂತರ ನಮಸ್ಕಾರ ಮಾಡಬೇಕು.

ಪಿತ್ತ ವಿಕಾರದವರು ಸ್ವಲ್ಪ ಸಕ್ಕರೆ ಮತ್ತು ಜೇನು ಸೇರಿಸಿ ಸೇವಿಸಿದ ನಂತರ ನಮಸ್ಕಾರ ಪ್ರಾರಂಭಿಸಬೇಕು.

ಹೃದ್ರೋಗಿಗಳು ಅಂಡವಾಯುರೋಗಿಗಳು ತಜ್ಞಯೋಗ್ಯವೈದ್ಯರ ಸಲಹೆ ಪಡೆದ ನಂತರವೇ ನಮಸ್ಕಾರವನ್ನು ಮಾಡಲು ಪ್ರಾರಂಭಿಸ ಬೇಕು.

ಸೂರ್ಯನಮಸ್ಕಾರವು ದೇಹಕ್ಕೆ ಹೊಸ ಚೈತನ್ಯವನ್ನು ತುಂಬುತ್ತದೆ. ಸಾಧಕನು ಇದರಿಂದ ಊರ್ಧ್ವರೇತಸ್ಸನಾಗುತ್ತಾನೆ ಶರೀರವು ದಷ್ಟಪುಷ್ಟವಾಗುತ್ತದೆ. ದೇಹದಲ್ಲಿ ನವಕಾಂತಿಯು ಮೂಡುತ್ತದೆ.

ದೀಪನಶಕ್ತಿಯು ವೃದ್ಧಿಯಾಗಿ ಮಲಬದ್ಧತೆಯು ನಿವಾರಣೆ ಯಾಗುತ್ತದೆ.

ಉದರಕ್ಕೆ ಸಂಬಂಧಿಸಿದ ಎಲ್ಲ ವಿಕಾರಗಳೂ ದೂರವಾಗುತ್ತವೆ.

ಮೆದುಳು, ಕತ್ತು ಕಶೇರುಕಸ್ತಂಭ, ಸೊಂಟ, ತೊಡೆ, ಮೀನ ಖಂಡ ಮೊದಲಾದ ಎಲ್ಲಭಾಗಗಳ ರೋಗವೂ ಪರಿಹಾರವಾಗಿ ಅಶಕ್ತತೆ, ಸ್ವಪ್ನದೋಷ, ಸ್ವಪ್ನ ಸ್ಖಲನ ಹಾಗೂ ಸಂಧಿವಾತಗಳು ದೂರಾಗುತ್ತವೆ.



# ಮೈಸೂರರಸರ ಕಾಲದಲ್ಲಿ




**ಡಾ|| ಎನ್. ಅನಂತರಂಗಾಚಾರ್**

( ಹಿಂದಿನ ಸಂಚಿಕೆಯ ತರುವಾಯ )

ನಾಲ್ವಡಿ ಕೃಷ್ಣರಾಜ ಒಡೆಯರವರು ಮುಂದೆ ಮೈಸೂರು ಸಿಂಹಾಸನಾಧಿಕಾರಿಗಳಾದರು. ಇವರ ಕಾಲವನ್ನು ಸಂಗೀತ ಮತ್ತು ನಾಟ್ಯಕಲೆಗಳ ದೃಷ್ಟಿಯಿಂದ ಸುವರ್ಣಯುಗವೆಂದು ಕರೆಯಬಹುದು. ಇವರ ಅದ್ವಿತೀಯವಾದ ಪ್ರೋತ್ಸಾಹದಿಂದ ಮೈಸೂರು ಸಕಲ ಕಲಾಕೇಂದ್ರವಾಯಿತು. ಇವರ ಉದಾರಾಶ್ರಯದಿಂದ ಅನೇಕ ಪರಸ್ಥಳೀಯರು (ಕಲಾವಿದರು) ಮೈಸೂರಿನಲ್ಲಿ ಬಂದು ನೆಲಸಿದರು. ರಾಜರ ಸಂಗೀತಪ್ರೇಮವು ಅವರ ಬಂಧುವರ್ಗದಲ್ಲೆಲ್ಲ ವ್ಯಾಪಿಸಿತ್ತು. ಇವರ ಸಹೋದರಿಯರಾದ ಕೃಷ್ಣಾಜಮ್ಮಣ್ಣಿ ಮತ್ತು ಜಯಲಕ್ಷ್ಮಮ್ಮಣ್ಣಿಯವರು ಉತ್ತಮ ವೀಣಾವಾದಕರು. ಲಕ್ಷ್ಮಮ್ಮಣ್ಣಿಯವರು ಒಂದು ಕೈಯಲ್ಲಿ ಪಿಯಾನೋವನ್ನು ಬಾಜಿಸುತ್ತ ಮತ್ತೊಂದು ಕೈಯಲ್ಲಿ ತಬಲಾವನ್ನು ಬಾಜಿಸುತ್ತಿದ್ದರು. ಅವರ ತಮ್ಮಂದಿರಾದ ಕಂಠೀರವ ನರಸಿಂಹರಾಜ ಒಡೆಯರು 1914 ರಷ್ಟು ಹಿಂದೆಯೇ ಪುಂಡರೀಕ ವಿಠಲನ ಕೃತಿಯನ್ನು ಪ್ರಕಾಶಪಡಿಸಿ ಖ್ಯಾತಿಪಡೆದಿದ್ದರು.

ನಾಲ್ವಡಿ ಕೃಷ್ಣರಾಜರು ಸ್ವಯಂವೈಣಿಕರು. ಅವರು ಪಟ್ಟಾಭಿಷಿಕ್ತರಾದ ತಕ್ಷಣವೇ ವೀಣೆ ಶೇಷಣ್ಣನವರಿಗೆ 'ವೈಣಿಕ ಶಿಖಾಮಣಿ' ಎಂಬ ಬಿರುದನ್ನು ಸೂಕ್ತಖಿಲ್ಲತ್ತುಗಳೊಡನೆ ದಯಪಾಲಿಸಿದರು. ಕೃಷ್ಣರಾಜರ ಸಂಗೀತ ವಿದ್ವತ್ತಿನ ಆಳ ಮತ್ತು ಗುಣಗಳು ಅವರ್ಣನೀಯ. ಅವರು ಕರ್ಣಾಟಕ, ಹಿಂದೂಸ್ತಾನಿ ಮತ್ತು ಪಾಶ್ಚಾತ್ಯ ಸಂಗೀತಗಳನ್ನೂ ಬಹು ಲೀಲಾಜಾಲವಾಗಿ ಬಾರಿಸುತ್ತಿದ್ದರು. ಪ್ರಖ್ಯಾತ ಪಾಶ್ಚಾತ್ಯ ಸಂಗೀತ ವಿದ್ವಾಂಸರಾದ ಡೆಫ್ರಿಸ್ ಮತ್ತು ಕರ್ನಲ್ ಫೌಲ್ಕ್ಸ್ ಅವರ ಗುರುಗಳು. ಬಹು ಚಿಕ್ಕ ವಯಸ್ಸಿನಲ್ಲಿಯೇ ಕೃಷ್ಣರಾಜರು ವಿದ್ವಾಂಸರ ಸ್ವರ ದೋಷಗಳನ್ನು ಗುರುತಿಸುತ್ತಿದ್ದರು. ಅವರು ಪಾಶ್ಚಾತ್ಯ ಸಂಗೀತವನ್ನು ಪಿಟೀಲು ಮೂಲಕ ಅಭ್ಯಸಿಸಿದರು. ಅವರು ಲಂಡನ್ನಿನ ಟ್ರಿನಿಟಿ ಕಾಲೇಜಿನ ಸಂಗೀತ ಪರೀಕ್ಷೆಯಲ್ಲಿ ಉತ್ತಮದರ್ಜೆಯಲ್ಲಿ ಉತ್ತೀರ್ಣರಾಗಿದ್ದರು. ಸುಪ್ರಸಿದ್ಧರಾದ ಮಿಸ್ಪೊವ್ಯಕಿ ಆಗ ಅವರ ಪರೀಕ್ಷಕರಾಗಿದ್ದರು. ಕರ್ಣಾಟಕ, ಹಿಂದೂಸ್ತಾನಿ ಮತ್ತು ಪಾಶ್ಚಿಮಾತ್ಯ ಸಾಮೂಹಿಕ ಗಾನಗೋಷ್ಠಿಯನ್ನು ಪ್ರತ್ಯೇಕವಾಗಿ ಏರ್ಪಡಿಸಿದ ಪ್ರಥಮ ರಾಜರವರು. ವಾರಕ್ಕೊಂದು ಸಲ ಕ್ಷಯರೋಗ ಆಸ್ಪತ್ರೆಯಲ್ಲಿ ರೋಗಿಗಳ ರೋಗದ ಉಪಶಮನಕ್ಕಾಗಿ ಸೂಕ್ತ ಸಾಮೂಹಿಕ ಗಾನವನ್ನೇರ್ಪಡಿಸಿದರು. ರೋಗಪರಿಹಾರಕ್ಕಾಗಿ ಸಂಗೀತವನ್ನು ಸುವ್ಯವಸ್ಥಿತ ರೀತಿಯಲ್ಲಿ ಭಾರತದಲ್ಲಿ ಮೊತ್ತಮೊದಲು ನಡೆಸಿದ ಪ್ರಯೋಗವಿದು.

ಕೃಷ್ಣರಾಜರು ವೀಣೆ ಶೇಷಣ್ಣ ಮತ್ತು ವೀಣೆ ಸುಬ್ಬಣ್ಣನವರಲ್ಲಿ ಕರ್ಣಾಟಕ ಸಂಗೀತವನ್ನು ಕಲಿತರು ಅನೇಕಸಲ ಅವರ ಗುರುಗಳೇ ಅವರ ಅದ್ಭುತ ಸಂಗೀತಪ್ರತಿಭೆಗೆ ಬೆರಗಾಗುತ್ತಿದ್ದರು. ಆ ಕಾಲದ ಕರ್ಣಾಟಕ ಮತ್ತು ಹಿಂದೂಸ್ತಾನಿ ಸಂಗೀತಗಾರರೆಲ್ಲ ಅವರೆದುರಿಗೆ ತಮ್ಮ ವಿದ್ವತ್ತನ್ನು ಪ್ರದರ್ಶಿಸಿ ಮೆಚ್ಚುಗೆಯನ್ನು ಪಡೆಯಲು ಹಾತೊರೆಯುತ್ತಿದ್ದರು. ಅದೊಂದು ದೊಡ್ಡ ಗೌರವವೆಂದೂ ಭಾವಿಸಿದ್ದರು. ಆದುದರಿಂದಲೇ ಭಾರತದ ಸುಪ್ರಸಿದ್ಧ ಸಂಗೀತಗಾರರೆಲ್ಲ ಮೈಸೂರಿಗೆ ಬಂದು ಕಛೇರಿಯನ್ನು ನಡೆಸುತ್ತಿದ್ದರು. ತಮ್ಮ ಆಸ್ಥಾನ ವಿದ್ವಾಂಸರೆಲ್ಲ ಅಖಿಲಭಾರತ ಕೀರ್ತಿಯನ್ನು ಪಡೆಯಬೇಕೆಂಬುದು ರಾಜರ ಉದಾರ ಧ್ಯೇಯವಾಗಿತ್ತು. ಅದಕ್ಕಾಗಿ ಅವರಿಗೆ ಅನೇಕ ಸೂಕ್ತ ಸಹಾಯಗಳನ್ನು ಕಲ್ಪಿಸುತ್ತಿದ್ದರು. ತಮ್ಮ ಅರಮನೆಯಲ್ಲಿ ನಡೆಯುತ್ತಿದ್ದ ಗಾನಗೋಷ್ಠಿಗಳ ಪ್ರಯೋಜನವನ್ನು ಧ್ವನಿವರ್ಧಕಗಳ ಮೂಲಕ ಪ್ರಜಾಸಮುದಾಯಕ್ಕೆ ಒದಗಿಸಿಕೊಟ್ಟರು. ಅಲ್ಲದೆ ವಿದ್ವಾಂಸರನ್ನು ವೈಣಿಕ ಶಿಖಾಮಣಿ, ನಾಟಕ ಶಿರೋಮಣಿ, ಗಾಯಕ ಶಿಖಾಮಣಿ, ವೈಣಿಕ ಪ್ರವೀಣ, ಗಾನವಿಶಾರದ, ಸಂಗೀತ ಶಾಸ್ತ್ರರತ್ನ, ಸಂಗೀತ ರತ್ನ – ಮೊದಲಾದ ಪ್ರಶಸ್ತಿಗಳಿಂದ ಗೌರವಿಸಿದರು. ಎಲ್ಲ ವಿದ್ವಾಂಸರ ಅತ್ಯುಜ್ವಲ ಕೃತಿಗಳನ್ನು ಸಂಗ್ರಹಿಸಿ ತಮ್ಮ ಭಂಡಾರದಲ್ಲಿ ಶೇಖರಿಸಿದರು. ಈ ಶೇಖರಣೆ ಭಾರತದಲ್ಲೆಲ್ಲ ಅತ್ಯಂತ ಬೃಹತ್ತಾದುದೆಂದು ಹೇಳಬಹುದು.

ವೀಣೆ ಸುಬ್ಬಣ್ಣ, ವೀಣೆ ಶಿವರಾಮಯ್ಯ, ವೀಣೆ ವೆಂಕಟಗಿರಿಯಪ್ಪ, ಗಾಯಕರುಗಳಾದ ಚಿಂತನಪಲ್ಲಿ ವೆಂಕಟರಾಯರು; ಅವರ ಮಕ್ಕಳಾದ ರಾಮಚಂದ್ರರಾಯರು, ಚಿಕ್ಕ ಸುಬ್ಬರಾಯರು, ಬಿಡಾರಂ ಕೃಷ್ಣಪ್ಪನವರು, ಅನಂತಶಾಸ್ತ್ರಿಗಳು, ಸುಂದರಶಾಸ್ತ್ರಿಗಳು, ಚಿಕ್ಕರಾಮ ರಾಯರು, ಬೆಳವಾಡಿ ಶ್ರೀನಿವಾಸಯ್ಯಂಗಾರ್ಯರು, ದೇವೇಂದ್ರಪ್ಪನವರು, ಶಿವಪ್ಪನವರು, ಲಕ್ಷ್ಮೀನಾರಾಯಣಪ್ಪನವರು, ಬೆಂಗಳೂರು ನಾಗರತ್ನಮ್ಮ, ಆರ್. ಎಸ್. ಕೇಶವಮೂರ್ತಿ, ಪಾಲ್ಘಾಟ್ ಅನಂತರಾಮ ಭಾಗವತರ್, ಮುತ್ತಯ್ಯ ಭಾಗವತರ್, ಅರಿಯಾಕೂಡಿ ರಾಮಾನುಜಯ್ಯಂಗಾರ್, ಶಿವರುದ್ರಪ್ಪ, ಟಿ. ಎಂ. ಪುಟ್ಟಸಾಮಯ್ಯ, ಪಿಟೀಲ್ ತಾಯಪ್ಪ, ಟೈಗರ್ ವರದಾಚಾರ್, ಟಿ. ಚೌಡಯ್ಯ, ತಬಲ ರಂಗಪ್ಪ, ಲಕ್ಷ್ಯ ಲಕ್ಷಣ ಪಂಡಿತ ವಾಸು

ದೇವಾಚಾರ್ಯ-ಮೊದಲಾದವರು ಅವರ ಆಸ್ಥಾನ ವಿದ್ವಾಂಸರಾಗಿದ್ದರು. ಸುಪ್ರಸಿದ್ಧ ಗಾಯಕರಾದ ರಾಮನಾಡು ಶ್ರೀನಿವಾಸಯ್ಯಂಗಾರ್, ಪಟ್ಟಣಂ ಸುಬ್ರಹ್ಮಣ್ಯ ಅಯ್ಯರ್, ಪಿಟೀಲು ವಿದ್ವಾನ್ ತಿರುಕ್ಕೋಡಿಕ್ಕಾವಲ್ ಕೃಷ್ಣಯ್ಯಂಗಾರ್, ಚೆಂಬೈ ವೈದ್ಯನಾಥ ಭಾಗವತರ್, ಘಟಂ ಸುಂದರಮಯ್ಯರ್ ದಕ್ಷಿಣಾಮೂರ್ತಿ ಪಿಳ್ಳೈ, ಪಾಲ್ಘಾಟ್ ರಾಮ ಭಾಗವತರ್, ಅಳಗನಂಬಿ ಮುಂತಾದ ಅನೇಕರು ಅವರಿಂದ ಸನ್ಮಾನಿತರಾಗಿದ್ದಾರೆ. ಹಾರ್ಮೋನಿಯಂ ಅರುಣಾಚಲಪ್ಪ ಮತ್ತು ಬಿ. ಎಸ್. ರಾಜಯ್ಯಂಗಾರ್ಯರ ಕಛೇರಿಗಳು ಪ್ರತಿವರ್ಷವೂ ನಡೆಯುತ್ತಿದ್ದವು. ಮಹಾರಾಜರ ಸನ್ಮಾನಕ್ಕೆ ಪಾತ್ರರಾಗಿದ್ದ ವೀಣೆ ವೆಂಕಟಗಿರಿಯಪ್ಪನವರ ನೇತೃತ್ವದಲ್ಲಿ ಪ್ರಪ್ರಥಮವಾಗಿ ಕರ್ಣಾಟಕ ವಾದ್ಯವೃಂದವು ಏರ್ಪಟ್ಟಿತು. ಅರಮನೆಯಲ್ಲಿ ನಾಟ್ಯಶಾಲೆ ಮತ್ತು ಸಂಗೀತ ಶಾಲೆಗಳು ಸ್ಥಾಪಿತವಾದುವು. ಉತ್ತರ ಭಾರತದ ಸಂಗೀತಗಾರರು ಆಹ್ವಾನಿತರಾಗಿ ಗೌರವಿಸಲ್ಪಟ್ಟರು. ಪ್ರಖ್ಯಾತ ಹಿಂದೂಸ್ತಾನಿ ನಾಯಕರಾದ ಫಯಾಜ್‌ಖಾನರಿಗೆ 'ಆಫ್ತಾಬ್ ಎ ಮೌಸಕಿ' (ಸಂಗೀತ ಸೂರ್ಯ) ಎಂಬ ಬಿರುದನ್ನು ನೀಡಿ ಗೌರವಿಸಿದರು. ಮತ್ತೊಬ್ಬ ಖ್ಯಾತ ಕಲಾವಿದ ಉಸ್ತಾದ್ ಅಬ್ದುಲ್ ಕರೀಂಖಾನ್ ಇವರಿಂದ ಸನ್ಮಾನಿತರಾಗಿದ್ದಾರೆ. ಹಿಂದೂಸ್ತಾನಿ ಗಾಯಕಿಯರಾದ ಇಂದುಬಾಯಿ ಮತ್ತು ಗೌಹರ್‌ಜಾನ್ ಎಂಬುವರು ಆಸ್ಥಾನ ವಿದುಷಿಯರಾಗಿದ್ದರು. ಕೃಷ್ಣರಾಜರ ಕಾಲವು ಸಂಗೀತ ದೃಷ್ಟಿಯಿಂದ ಸುವರ್ಣಯುಗವೆಂದು ನಿಸ್ಸಂದೇಹವಾಗಿ ಹೇಳಬಹುದು.

ಮುಂದಕ್ಕೆ ಪಟ್ಟಕ್ಕೆಬಂದ ಜಯಚಾಮರಾಜ ಒಡೆಯರು (೧೯೪೦–೧೯೭೪) ಹಿಂದಿನ ಶಿಷ್ಟ ಸಂಪ್ರದಾಯವನ್ನು ಪಾಲಿಸಿಕೊಂಡು ಬಂದರು. ಭಾರತೀಯ ಅದ್ಭುತ ಸಂಸ್ಕೃತಿಯ ಯೋಗ್ಯ ಪ್ರತಿನಿಧಿಯಾಗಿ ಅವರು ವಿವಿಧ ದೃಷ್ಟಿಗಳಿಂದ ಗಣ್ಯವ್ಯಕ್ತಿಯಾಗಿದ್ದರು. ಆಡಳಿತಗಾರ, ರಾಜಕಾರಣಿ, ದಾರ್ಶನಿಕ, ತಂತ್ರಸಾಧಕ, ಭಕ್ತ, ದಾನಶೂರ, ಪ್ರಜಾಹಿತೈಷಿ, ದಕ್ಷ ಬೇಟೆಗಾರ, ಕವಿ ಮತ್ತು ಲೇಖಕ, ಅತ್ಯುಚ್ಚ ಮೇಧಾವಿಯಾಗಿ ಕಾಲಕ್ಕೆ ತಕ್ಕಂತೆ ಪರಿವರ್ತನ ಹೊಂದಿ ತನ್ನ ಅನೇಕ ಸೌಭಾಗ್ಯವನ್ನು ಮಾನವ ಸೌಖ್ಯಕ್ಕಾಗಿ ಧಾರೆಯೆರೆದ ಏಕೈಕ ಕಾಲಜ್ಞ. ಭಾರತದ ಒಕ್ಕೂಟಕ್ಕೆ ಮೊತ್ತಮೊದಲು ತನ್ನ ರಾಜ್ಯವನ್ನು ಬಿಟ್ಟುಕೊಟ್ಟ ಮೊದಲನೆಯ ದೊರೆ. ಅಖಿಲ ಭಾರತ ವನ್ಯಮೃಗಗಳ ರಕ್ಷಣಾಮಂಡಲಿಯ ಅಧ್ಯಕ್ಷ. ಮೈಸೂರು ಮತ್ತು ಕಾಶಿ ವಿಶ್ವವಿದ್ಯಾನಿಲಯಗಳ ಕುಲಪತಿ...ಕೆಲಕಾಲ ರಾಜಪ್ರಮುಖ ಮತ್ತು ರಾಜ್ಯಪಾಲರಾಗಿದ್ದವರು.

ಇವೆಲ್ಲವೂ ಮರೆತುಹೋದರೂ ಅವರ ಹೆಸರು ಶಾಶ್ವತವಾಗಿ ಉಳಿಯುವುದು ಅವರು ಸಂಗೀತ ಪ್ರಪಂಚದಲ್ಲಿ ಸಾಧಿಸಿದ ಮಹತ್ಕಾರ್ಯಗಳಿಂದ. ಅವರು ಪ್ರಖ್ಯಾತ ಪಿಯಾನೋವಾದಕರು. ಲಂಡನ್ನಿನ ಟ್ರಿನಿಟಿ ಕಾಲೇಜಿನಲ್ಲಿ ಎಲ್ಲ ಸಂಗೀತ ಪರೀಕ್ಷೆಗಳಲ್ಲಿಯೂ ಗಣ್ಯರೀತಿಯಲ್ಲಿ ಉತ್ತೀರ್ಣರಾಗಿದ್ದರು. ಕೊನೆಗೆ ಅದರ ಉಪಪೋಷಕರಾಗಿದ್ದರು. ಅವರು ಅನೇಕ ಪಾಶ್ಚಾತ್ಯ ಸಂಗೀತ ಪ್ರಪಂಚದ ಪ್ರಮುಖ ವಿದ್ವಾಂಸರ ವಾಗ್ಗೇಯಕಾರ ಮತ್ತು ಸಂಗೀತ ಪ್ರೇಮಿಗಳ ಆದರಾತಿಥ್ಯಕ್ಕೆ ಪಾತ್ರರಾಗಿದ್ದರು. ಅನೇಕ ಪಾಶ್ಚಾತ್ಯ ವಿದ್ವಾಂಸರು ತಮ್ಮ ಸಂಗೀತ ಕೃತಿಗಳನ್ನು ಇವರಿಗೆ ಅಂಕಿತ ಮಾಡಿದ್ದಾರೆ. ಖ್ಯಾತ ವಿಜ್ಞಾನಿ ರಾಜಾರಾಮಣ್ಣನವರು ಪಿಯಾನೋ ವಾದ್ಯದಲ್ಲಿ ಇವರ ಸಹಪಾಠಿಯಾಗಿದ್ದರು. ಅವರ ಪಾಶ್ಚಾತ್ಯ ಸಂಗೀತ ವಿದ್ವತ್ತು ಅದ್ಭುತವಾಗಿತ್ತು. ಪಾಶ್ಚಾತ್ಯ ಸಂಗೀತ ಕೃತಿಗಳ ಅವರ ಭಂಡಾರ ಅತ್ಯಂತ ದೊಡ್ಡದೆಂದು ಹೇಳಬಹುದು.

ಸಂಗೀತರತ್ನ ಚೌಡಯ್ಯ, ಸಂಗೀತಶಾಸ್ತ್ರರತ್ನ ವಾಸುದೇವಾಚಾರ್, ವೈಣಿಕಪ್ರವೀಣ ವೆಂಕಟಗಿರಿಯಪ್ಪ, ಗಾನವಿಶಾರದ ಬಿ. ದೇವೇಂದ್ರಪ್ಪ ವಿದ್ವಾನ್ ತಿಟ್ಟೆ ಕೃಷ್ಣಯ್ಯಂಗಾರ್, ಸಂಗೀತಶಾಸ್ತ್ರ ವಿಶಾರದ ಟೈಗರ್ ವರದಾಚಾರ್, ವೀಣೆ ವಿದ್ವಾನ್ ಶಿವರಾಮಯ್ಯ, ಸಂಗೀತ ಕಲಾನಿಧಿ ಅರಿಯಾಕುಡಿ ರಾಮಾನುಜಯ್ಯಂಗಾರ್, ಸಂಗೀತರತ್ನ ಬಿ. ಎಂ. ಪುಟ್ಟಸ್ವಾಮಯ್ಯ, ವೈಣಿಕ ಪ್ರವೀಣ ಆರ್. ಎಸ್. ಕೇಶವಮೂರ್ತಿ, ಗಾನಕಲಾಸಿಂಧು ಎಸ್. ಚನ್ನಕೇಶವಯ್ಯ, ವೀಣೆ ವಿದ್ವಾನ್ ಡಾ॥ ದೊರೆಸ್ವಾಮಯ್ಯಂಗಾರ್, ಆರ್. ಎನ್. ದೊರೆಸ್ವಾಮಿ, ವಿದ್ವಾನ್ ಎಸ್. ಮರಿಯಪ್ಪ ಮೊದಲಾದ ಕಲಾವಿದರು ಇವರ ಆಸ್ಥಾನವನ್ನಲಂಕರಿಸಿದ್ದರು.

ಸಂಗೀತ ಪ್ರಪಂಚದಲ್ಲಿ ಆಗಿರುವ ಪ್ರಗತಿಯೊಡನೆ ಜಯಚಾಮರಾಜ ಒಡೆಯರ ಹೆಸರು ನಿಕಟವಾಗಿ ಸಂಬಂಧಿಸಿದೆ. ಅವರು ರಾಜರಲ್ಲಿ ಸಂಗೀತಗಾರರು, ಸಂಗೀತಗಾರರಲ್ಲಿ ರಾಜರು. ಭಕ್ತಿಭರಿತವಾದ ಅವರ ಕೃತಿಗಳೆಲ್ಲ ಪ್ರಾಚೀನ

( 32 ನೇ ಪುಟ ನೋಡಿ )

# ಶ್ರೀ ವೆಂಕಟೇಶ್ವರ ಮಂಗಳಾಶಾಸನಂ

ಕನ್ನಡಾವತರಣ· ಜಿ. ಚೆನ್ನಯ್ಯ ಎಂ ಎ.

ಕಮಲಾಮನೋಹರ! ಕಾರುಣ್ಯಪೂರ!
ಇಷ್ಟಾರ್ಥ ಭಕ್ತರಿಗೀವ ಭಂಡಾರಿ!
ವರ ವೆಂಕಟಾಚಲದಿ ವಾಸಿವಾಗಿಹನೆ!
ಪಡೆಯಯ್ಯ ಶ್ರೀ ಶ್ರೀನಿವಾಸ! ಮಂಗಳವ ೧

ಚೆಲುವಾದ ಹುಬ್ಬುಳ್ಳ ಶೃಂಗಾರ ಹೊಳೆವ
ಕಣ್ಣಿಂದ ಬೆರಗಾಗಿ ಕಮಲೆಯು ಚೆಲುವ
ಕಾಣುತ ಜಗಕೆಲ್ಲ ಕಣ್ಣಾದ ಸ್ವಾಮಿ!
ಪಡೆಯಯ್ಯ ಶ್ರೀ ಶ್ರೀನಿವಾಸ! ಮಂಗಳವ ೨

ಶ್ರೀ ವೆಂಕಟಾದ್ರಿಯ ಶಿಖರಾಗ್ರ ಭುವಿಗೆ
ವರಭೂಷಣಗಳಾದ ಪಾದಂಗಳಿಟ್ಟು
ಅಖಿಲ ಭಾಗ್ಯದರಾಶಿಗಾವಾಸವಾಗಿಹನೆ!
ಪಡೆಯಯ್ಯ ಶ್ರೀ ಶ್ರೀನಿವಾಸ! ಮಂಗಳವ ೩

ಸರ್ವಾವಯವಗಳ ಸೌಂದರ್ಯವೆಂಬ
ಸಿರಿಯು ಬೀರಿ ಎಲ್ಲರ ಚಿತ್ತಂಗಳಲ್ಲಿ
ನಿತ್ಯವು ಪರವಶಗೊಳಿಸುತಿಹನೆ!
ಪಡೆಯಯ್ಯ ಶ್ರೀ ಶ್ರೀನಿವಾಸ! ಮಂಗಳವ ೪

ನಿಖಿಲ ಕಾಲಿಕವರ್ತಿ! ನಿರ್ದುಷ್ಟ ಕೀರ್ತಿ!
ಸೂನೃತಾನಂದದ ಸುಭಗಾಂತರಂಗ!
ಸಕಲ ವಿಶ್ವಾಂತರ ಸಂವಾಸ ಮೂರ್ತಿ!
ಪಡೆಯಯ್ಯ ಶ್ರೀ ಶ್ರೀನಿವಾಸ! ಮಂಗಳವ ೫

ಸರ್ವಸ್ವ ತಿಳಿಯುವ ಚತುರನಾಗಿಹನೆ!
ಸರ್ವ ಶಕ್ತಿಗಳುಳ್ಳ ಶಾಶ್ವತ ಮೂರ್ತಿ!
ಆಶ್ರಿತ ಸುಲಭನೆ! ಅಮಲ ಚಾರಿತ್ರ್ಯ!
ಪಡೆಯಯ್ಯ ಶ್ರೀ ಶ್ರೀನಿವಾಸ! ಮಂಗಳವ ೬

ಪರಮ ವೇದಾತ್ಮನೆ! ಪರಮಾತ್ಮ! ನೀನೆ
ಕಾಮಿತಾರ್ಥಗಳೆಲ್ಲ ಕಡೆಗಂಡ ಜಾಣ!
ಪರತತ್ತ್ವ ಮಹಿಮೆಯ ಪಾಲಿಸುವವನೆ!
ಪಡೆಯಯ್ಯ ಶ್ರೀ ಶ್ರೀನಿವಾಸ! ಮಂಗಳವ ೭

ಸಾರ್ವಕಾಲಿಕವಾದ ಸತ್ಯಸ್ವರೂಪ!
ಅನುನಿತ್ಯ ನೋಡಿದರಾತ್ಮಂಗಳಲ್ಲಿ
ತೃಪ್ತಿ ತೀರದ ಸುಧಾದೀಪ್ತಿ ಸಂಯುತನೆ!
ಪಡೆಯಯ್ಯ ಶ್ರೀ ಶ್ರೀನಿವಾಸ! ಮಂಗಳವ ೮

ವಾತ್ಸಲ್ಯಯುತನಾಗಿ ಭಕ್ತರಿಗೆಲ್ಲ
ಶರಣಾಗಿರೀ ಎನ್ನ ಚರಣಂಗಳಲ್ಲಿ
ಎಂಬಂತೆ ಕೈದೋರುತಿರುವಂಥ ಸ್ವಾಮಿ!
ಪಡೆಯಯ್ಯ ಶ್ರೀ ಶ್ರೀನಿವಾಸ! ಮಂಗಳವ ೯

ಅಮೃತ ಪ್ರವಾಹದ ಅಲೆಗಳ ಚಂದ
ಅನುಕಂಪ ತಳೆದ ಕಟಾಕ್ಷಂಗಳಿಂದ
ವಿಶ್ವಕೆಲ್ಲಕೆ ತಂಪು ಬೀರುವ ಸ್ವಾಮಿ!
ಪಡೆಯಯ್ಯ ಶ್ರೀ ಶ್ರೀನಿವಾಸ! ಮಂಗಳವ ೧೦

ಹೂ ಭೂಷಣಾಂಬರಾಯುಧಗಳಿಗೆಲ್ಲ
ದಿವ್ಯ ಕಾಂತಿಯರಾಶಿ ದೀಪಿಸುತಿಹನೆ!
ಸರ್ವ ಲೋಕಾರ್ತಿಗೆ ಸಂಹಾರ ಮೂರ್ತಿ!
ಪಡೆಯಯ್ಯ ಶ್ರೀ ಶ್ರೀನಿವಾಸ! ಮಂಗಳವ ೧೧

ವೈಕುಂಠಪುರಿ ಮೇಲೆ ವೈರಾಗ್ಯಮೂಡಿ
ದಿವ್ಯ ಕಲ್ಯಾಣಿಯ ತೀರವ ಸೇರಿ
ಶ್ರೀ ಲಕ್ಷ್ಮಿಯೊಡ ಗೂಡಿ ಕ್ರೀಡಿಸುತಿಹನೆ!
ಪಡೆಯಯ್ಯ ಶ್ರೀ ಶ್ರೀನಿವಾಸ! ಮಂಗಳವ ೧೨

ಜಗದೀಶ! ಸುಂದರ ಜಾಮಾತೃ ಮುನಿಯ
ಎದೆಯಲ್ಲಿ ನೆಲೆಯೂಗಿ ಎಲ್ಲ ಲೋಕಗಳ
ವ್ಯಾಪಿಸಿ ಸರ್ವದಾ ವಾಸವಾಗಿಹನೆ!
ಪಡೆಯಯ್ಯ ಶ್ರೀ ಶ್ರೀನಿವಾಸ! ಮಂಗಳವ ೧೩

ಮಂಗಳಾಶಾಸನ ಮಗ್ನರು ನನ್ನ
ಗುರುಗಳಿಗಾದರ್ಶ ಗುರುಗಳಾದಂಥ
ಪೂರ್ವಿಕರೆಲ್ಲರ ಪೂಜೆ ಹೊಂದಿನೆ!
ಪಡೆಯಯ್ಯ ಶ್ರೀ ಶ್ರೀನಿವಾಸ! ಮಂಗಳವ ೧೪

‖ ಓಂ ಶಾಂತಿ ಶ್ಶಾಂತಿ ಶ್ಶಾಂತಿಃ ‖

( 30 ನೇ ಪುಟದಿಂದ )

ಸಾಂಪ್ರದಾಯಿಕ ಕರ್ಣಾಟಕ ಮಾದರಿಯಲ್ಲಿಯೇ ರಚಿತವಾಗಿವೆ. ಸಂಸ್ಕೃತ ಭಾಷೆಯಲ್ಲಿವೆ, ಅತ್ಯಂತ ಭಾವಾವೇಶಪೂರಿತವಾಗಿವೆ. ಅವು ಅಮೋಘವಾದ ಗೀತ ರತ್ನಗಳು. ಒಡೆಯರ ಅತ್ಯದ್ಭುತ ಕೃತಿರಚನಾಶಕ್ತಿಯನ್ನು ಅರಿಯಲು ಪ್ರಪಂಚಕ್ಕೆ ಕೆಲವು ಕಾಲವೇ ಬೇಕಾಯಿತು. ಸುಪ್ರಸಿದ್ಧ ಕರ್ಣಾಟಕ ಸಂಗೀತ ತ್ರಿಮೂರ್ತಿಗಳಾದ ತ್ಯಾಗರಾಜ, ದೀಕ್ಷಿತ ಮತ್ತು ಶ್ಯಾಮಾಶಾಸ್ತ್ರಿಗಳಿಗೆ ಅಪಾರವಾದ ಶಿಷ್ಯಸಂಪತ್ತಿದ್ದುದರಿಂದ ಅವರ ಕೃತಿಗಳು ಶಿಷ್ಯರಮೂಲಕ ಅತಿ ಶೀಘ್ರವಾಗಿ ಬೆಳಕಿಗೆ ಬಂದುವು, ಜನಪ್ರಿಯವಾದುವು. ಸ್ವಾತಿತಿರುನಾಳ (೧೮೧೩–೧೮೪೬) ರಂತೆಯೇ ಒಡೆಯರಿಗೆ ಈ ಭಾಗ್ಯ ಬರಲಿಲ್ಲ. ಇವರ ಕೃತಿಗಳೆಲ್ಲ ಇವರ ಆಸ್ಥಾನ ವಿದ್ವಾಂಸರಿಂದ, ಇವರಿಂದ ಬಹುಮಾನಿತವಾದವರಿಂದ, ಇವರನ್ನು ಅರಿತಿದ್ದ ಕೆಲವೇ ಗಾಯಕರಿಂದ ಪ್ರಪಂಚಕ್ಕೆ ಪ್ರಕಾಶವಾಗಬೇಕಾಯಿತು. ಆದುದರಿಂದ ಅವು ಜನಪ್ರಿಯವಾಗಲು ಕೆಲವು ಕಾಲ ವಿಳಂಬವಾಯಿತು. ಇಂತಹವರಿಗೂ ಅತಿನಿಕಟ ಪರಿಚಯವಿದ್ದುದರಿಂದ 'ಹಿತ್ತಿಲಗಿಡ ಮದ್ದಲ್ಲ' ಎಂಬ ನಾಣ್ಣುಡಿಗನುಗುಣವಾಗಿ ತಮ್ಮ ಪೋಷಕರ ಕೃತಿಗಳ ನಿಜವಾದ ಬೆಲೆಯನ್ನು ತಿಳಿಯಲು ಕಷ್ಟವೇ ಆಯಿತು.

ಜಯಚಾಮರಾಜ ಒಡೆಯರು ಪಾಶ್ಚಾತ್ಯ ಸಂಗೀತ ಪ್ರಚಾರಕರು. ಪಿಯಾನೋವಾದ್ಯದಲ್ಲಿ ಪ್ರವೀಣರು. ಆದರೂ ಕರ್ಣಾಟಕ ಸಂಗೀತದ ಅವಿಚ್ಛಿನ್ನ ಭಕ್ತರು, ಪೋಷಕರು; ಸಂಗೀತಶಾಸ್ತ್ರದ ನಿಪುಣರೂ, ಅಸಂಖ್ಯಾತ ಕೃತಿಗಳ ರಚನಾಕಾರರೂ ಆದ ವಾಸುದೇವಾಚಾರ್ಯರ ಶಿಷ್ಯರು. ಒಡೆಯರ ಉತ್ತಮ ಸಂಸ್ಕೃತ ಜ್ಞಾನವು ಅವರ ಕೃತಿರಚನೆಗೆ ಬಹುಮಟ್ಟಿಗೆ ನೆರವಾಯಿತು. ಶ್ರೀ ವಿದ್ಯಾದೇವತೆಯ ಉಪಾಸಕರಾದುದರಿಂದ ಮುತ್ತುಸ್ವಾಮಿ ದೀಕ್ಷಿತರಿಂದ ವಿಶೇಷ ಪ್ರೇರಿತರಾದವರು. ಅವರ 'ಕಮಲಾಂಬಾ ನವವರ್ಣ ಕೃತಿಗಳು' ಇವರಿಗೆ ಮಾರ್ಗದರ್ಶಕವಾಗಿದ್ದಿರಬೇಕು. ಮೈಸೂರರಸರ ಕುಲದೇವತೆಯಾದ ಚಾಮುಂಡೇಶ್ವರಿಯ ಅಪರಾವತಾರವೇ ಅವರ ಶ್ರೀವಿದ್ಯಾ. ದೀಕ್ಷಿತರ ಕೃತಿಗಳ ಗಾಂಭೀರ್ಯ, ಔನ್ನತ್ಯ, ಆಳ, ವಿಸ್ತಾರ, ಪ್ರಭಾವ,– ಇವೆಲ್ಲವನ್ನೂ ಒಡೆಯರ ಕೃತಿಗಳಲ್ಲಿ ಕಾಣಬಹುದು. ಸ್ವತಃ ರಚಿಸಿದ ಅಥವಾ ಇತರರಿಂದ ತೆಗೆದುಕೊಂಡ ಎಲ್ಲ ರಾಗಗಳಲ್ಲಿಯೂ ಅವರ ಸ್ವಂತಮುದ್ರೆಯನ್ನು ಕಾಣಹುದು. ದೀಕ್ಷಿತರಂತೆಯೇ ಇವರ ಕೃತಿಗಳಲ್ಲಿಯೂ ಐಹಿಕ ಮತ್ತು ಆಮುಷ್ಮಿಕ ಪ್ರಭಾವಗಳನ್ನು ಕಾಣಬಹುದು. ಜಯಚಾಮರಾಜರು ಶ್ರೀ ವಿದ್ಯಾವಿಷಯಕವೇ ಅಲ್ಲದೆ ವಿನಾ..ಕ, ಈಶ್ವರ, ಸರಸ್ವತಿ, ಕೃಷ್ಣರ ವಿಷಯಕವಾಗಿ ಕೃತಿಗಳನ್ನು ರಚಿಸಿದ್ದಾರೆ. ಸಂಖ್ಯಾ ದೃಷ್ಟಿಯಿಂದ ಅವರ ಕೃತಿಗಳು ಅಷ್ಟು ಹೆಚ್ಚಿನದೇನಲ್ಲ. ಶಾಸ್ತ್ರ ದೃಷ್ಟಿಯಿಂದಲೂ ಭಾವ ರಸ ಪಾರಮ್ಯ ದೃಷ್ಟಿಯಿಂದಲೂ ಅವು ಬಹುಮಟ್ಟಿಗೆ ದೀಕ್ಷಿತರ ಕೃತಿಗಳೊಡನೆ ಸಮತೂಗ ಬಲ್ಲವು.

ಜಯಚಾಮರಾಜರು ಉತ್ತಮ ವಾಗ್ಗೇಯಕಾರರು. ಅವರು ತಮ್ಮ ೯೪ ಕೃತಿಗಳಿಗೆ ೯೪ ಭಿನ್ನರಾಗಗಳನ್ನು ಉಪಯೋಗಿಸಿದ್ದಾರೆ. ಕೆಲವು ಸುಪ್ರಸಿದ್ಧ ಮೇಳಗಳಲ್ಲಿದ್ದರೆ ಮತ್ತೆ ಕೆಲವು ಭಿನ್ನವಾದ ಜನ್ಯರಾಗಗಳಲ್ಲಿವೆ. 'ವಂದೇ ಹಂಸದಾ' ಎಂಬ ಸರಸ್ವತೀವಿಷಯವಾದುದೂ, ಹಂಸನಟಿನಿಯಲ್ಲಿರುವ 'ಪಾಹಿ ಶ್ರೀ ರಾಜೇಶ್ವರಿ' ಎಂಬುದೂ, ಧೀರ ಶಂಕರಾಭರಣದಿಂದ ಜನ್ಯವಾದ ಕೋಕಿಲಭಾಷಿಣಿಯಲ್ಲಿರುವ 'ಶ್ರೀ ವಿದ್ಯಾಮೋಹಿನಿ', ವಿಜಯ ವಸಂತದಲ್ಲಿರುವ 'ವಿಮಲಾಂಬಿಕಾ' ಎಂಬುವು ಕೆಲವು ಉದಾಹರಣೆಗಳು. ನೀಲವೇಣಿಯಲ್ಲಿರುವ ಅವರ 'ಬಾಲಕೃಷ್ಣಂ ಭಜೇಹಂ' ಅಪೂರ್ವವಾದ ಕೃತಿರತ್ನ. ಒಡೆಯರ ಹೊಸರಾಗಗಳಲ್ಲಿ 'ಜಯಸಂವರ್ಧಿನಿ' ಬಹು ಸುಂದರವಾಗಿದೆ. ಸುಪ್ರದೀಪರಾಗದಲ್ಲಿರುವ ವಿನಾಯಕ ಪರವಾದ 'ಪಾಹಿಮಾಂ ಶ್ರೀ ಪಂಚಮತಂಗ' ಬಹು ಅಪೂರ್ವವಾದುದು. ಇದೇ ರಾಗದಲ್ಲಿರುವ ತ್ಯಾಗರಾಜರ 'ವರಶಿಖವಾಹನ' ಎಂಬ ಕೃತಿ ಬಿಟ್ಟರೆ ಆ ರಾಗದಲ್ಲಿ ಬೇರೇ ಕೃತಿಗಳೇ ಇಲ್ಲ. ಅವರ ಹಿಂದೋಲ ರಾಗದಲ್ಲಿರುವ 'ಚಿಂತಯಾಮಿ' ಗಂಭೀರ ನಟದಲ್ಲಿರುವ 'ಜಾಲಂಧರಮಾಶ್ರಯೇ' ಮಾಯಾಮಾಳವ ಗೌಳದಲ್ಲಿರುವ 'ಕ್ಷೀರಸಾಗರ ಶಯನ', ಅಠಾಣದಲ್ಲಿರುವ 'ಮಹಾಗಣಪತೇ' ಪ್ರತಾಪವರಾಳಿಯಲ್ಲಿರುವ 'ಭೂರಿಭಾಗ್ಯಲಹರಿ' ಮಲಹರಿಯಲ್ಲಿರುವ 'ಬ್ರಹ್ಮಾಂಡ ವಲಯೇ' ಧರ್ಮವತಿಯಲ್ಲಿರುವ 'ದುರ್ಗಾದೇವಿ ಸಂರಕ್ಷತುಮಾಂ', ನಾದನಾಮ ಕ್ರಿಯೆಯಲ್ಲಿರುವ 'ಶಿವ ಶಿವ ಭೋ' ಮೊದಲಾದುವು ಚಿರಪರಿಚಿತವಾಗಿದೆ. ಒಡೆಯರು ತಮ್ಮ ಕೃತಿಗಳಲ್ಲಿ ಸುಳಾದಿ ಸಪ್ತತಾಳಗಳನ್ನು ಯಥೋಚಿತವಾಗಿ ಉಪಯೋಗಿಸಿಕೊಂಡಿದ್ದಾರೆ. ಇವರ ಕೃತಿಗಳನೇಕವು ಇಂದಿನ ವಿದ್ವಾಂಸರಿಂದ ಆಕಾಶವಾಣಿಯೇ ಮೊದಲಾದುವುಗಳ ಮೂಲಕ ಹೆಚ್ಚು ಹೆಚ್ಚು ಜನಪ್ರಿಯವಾಗುತ್ತಿರುವುದು ಬಹು ಸಂತೋಷದ ವಿಷಯ. ಒಡೆಯರು ತಮ್ಮ ಅಪಾರ ಕಾರ್ಯಗೌರವದ ಮಧ್ಯೆ ಸಂಗೀತದಲ್ಲಿ ಆಸಕ್ತಿ ವಹಿಸಿ, ಪಾಂಡಿತ್ಯವನ್ನು ಪಡೆದು ಉತ್ತಮ ಗಾಯಕರೂ ವಾದಕರೂ ಆಗಿ ಶ್ರೇಷ್ಠವರ್ಗದ ವಾಗ್ಗೇಯಕಾರರೂ ಆಗಿರುವುದು ಒಂದು ಅಸಾಧ್ಯಸಾಧನೆಯೆಂಬುದರಲ್ಲಿ ಸಂದೇಹವಿಲ್ಲ. ಇವರಿಂದ ಮೈಸೂರರಸರು ಪ್ರಾರಂಭಿಸಿದ ಸಂಗೀತ ಕಲಾಪ್ರೋತ್ಸಾಹ ಅತ್ಯುನ್ನತ ಶಿಬಿರಕ್ಕೆ ಏರಿದೆ. ★

---

( 11 ನೇ ಪುಟದಿಂದ )

ಸಂಕಲ್ಪಪೂರ್ವಕಸ್ನಾನ, ಸಂಧ್ಯಾನ, ಗಾಯತ್ರಿ – ಗುರುಮಂತ್ರಜಪಾದಿಗಳಲ್ಲಿ ಮನಸ್ಸನ್ನು ತೊಡಗಿಸಿ, 'ದಿನಗಳನು ಕಳೆವ ಜನರೇ ಸುಜನರು' ಅವರ ದೃಷ್ಟಿಯಲ್ಲಿ. 'ತಾಳುವಿಕೆಗಿಂತ ತಪವು ಇಲ್ಲ' ಎಂಬುದು ವಾದಿರಾಜರ ಸಾರ್ವತ್ರಿಕ ಸಂದೇಶವೆಂದು ಭಾವಿಸಬಹುದು. ಸಮಾಜಜೀವನದಲ್ಲಿ ಹಣದ ಪಾತ್ರವನ್ನರಿತ ಅವರು 'ಹಣವೇ ನಿನ್ನಯ ಗುಣವನೇನ ಬಣ್ಣಿಪೆನು। ಹಣವಿಲ್ಲದವ ಹೆಣಕಿಂತ ಕಡೆ' ಎಂಬ ಮಾತುಗಳಲ್ಲಿ ಸಶಕ್ತವಾಗಿ ವಿಡಂಬಿಸಿದ್ದಾರೆ. ಶ್ರೀಹರಿಯ ಮತ್ಸ್ಯ, ಕೂರ್ಮ, ವರಾಹಾದಿ ದಶಾವತಾರಗಳ ಸ್ತುತಿಯನ್ನು ವಾದಿರಾಜರ ಕೃತಿಗಳಲ್ಲಿ ಮೇಲಿಂದ ಮೇಲೆ ಕಾಣಬಹುದು. ಅವರ ಉರುಟಣೆಹಾಡು, 'ಹ್ಯಾಂಗೆ ಕೊಟ್ಟನೊ ಹೆಣ್ಣ ಸಾಗರನು ಇವನಿಗೆ' ಎಂಬ ಕೀರ್ತನೆ ಮೊದಲಾದವುಗಳಲ್ಲಿ ಅವರ ಹಾಸ್ಯಪ್ರವೃತ್ತಿಯನ್ನು ಗುರುತಿಸಬಹುದು.

ವಾದಿರಾಜರದು ಬಹುಮುಖ ಪ್ರತಿಭೆ. ಕನ್ನಡ, ಸಂಸ್ಕೃತಗಳೆರಡರಲ್ಲೂ ಪ್ರಭುತ್ವವಿದ್ದ ಸವ್ಯಸಾಚಿಗಳು. ಒಳ್ಳೆಯ ಆಡಳಿತ ನಿಪುಣರು, ಕವಿಗಳು ಮತ್ತು ವಾಗ್ಮಿಗಳು. ಹರಿಸರ್ವೋತ್ತಮತ್ವದ ಪ್ರಸಾರಕ್ಕಾಗಿಯೇ ಜೀವನವನ್ನು ಬಾಳಿದವರು. ಬಾಲಯತಿಗಳಾಗಿದ್ದಾಗಲೇ ಸಾಮಾನ್ಯಜನರ ಸ್ಥಿತಿ – ಗತಿಗಳಬಗ್ಗೆ ಕಾಳಜಿ ತೋರಿದವರು. ಸಮಾಜದಲ್ಲಿದ್ದ ನಾನಾರೀತಿಯ ಜನರ ಭಾವನೆ, ಹೃದಯಗಳನ್ನು ಅರಿತಿದ್ದವರೆಂಬುದು ಅವರ ಕೃತಿಸಮುದಾಯದಿಂದ ಸ್ಪಷ್ಟವಾಗುತ್ತದೆ. *

---

# ಸೂಚನೆ.

ಶ್ರೀ ವೆಂಕಟೇಶ್ವರಸ್ವಾಮಿಯವರ ಹುಂಡಿಗೆ ಕಾಣಿಕೆಗಳನ್ನು ಕಳುಹಿಸುವ ಭಕ್ತಾದಿಗಳು "ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ., ತಿರುಪತಿ" ಇವರ ಖಾತೆಯ ಹೆಸರಿಗೆ ಮಾತ್ರವೇ ಬ್ಯಾಂಕ್ ಡ್ರಾಫ್ಟ್ ಕಳುಹಿಸಬೇಕೆಂದು ಈ ಮೂಲಕ ಸೂಚಿಸಲಾಗಿದೆ.

**ತಿ. ತಿ. ದೇ.**



# ಗೃಹಲಕ್ಷ್ಮಿ



ಆದಿ ಶಕ್ತಿಯು ಅನಂತ ಅವತಾರಗಳನ್ನು ಎತ್ತಿ, ದುಷ್ಟರನ್ನು ನಿಗ್ರಹಿಸಿ ಲೋಕ ಕಲ್ಯಾಣ ಮಾಡಿರುವ ಅನೇಕ ದೃಷ್ಟಾಂತಗಳನ್ನು ನಾವು ಭಾರತದಲ್ಲಿ ಕಾಣುತ್ತೇವೆ. ಭಾರತದಲ್ಲಿ ಸ್ತ್ರೀಯರಿಗೆ ಗೌರವ ಹಾಗೂ ಪೂಜ್ಯ ಸ್ಥಾನ ನೀಡಿರುವ ಮಾತ್ಯಾವ ರಾಷ್ಟ್ರದಲ್ಲೂ ನಾವು ಕಾಣುವುದಿಲ್ಲ. "ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾ" ಎಂದು ಹೇಳಿರುವಂತೆ, ಪ್ರತಿ ಕಾರ್ಯದಲ್ಲೂ ಸ್ತ್ರೀಗೆ ಪೂಜ್ಯ ಸ್ಥಾನ ಕೊಟ್ಟಿದೆ.

ಕೃತಯುಗದ ಆದಿಯು ಆದಿಶಕ್ತಿಯು ಸತಿನಳಾಯಿನಿಯಾಗಿ ಅವತರಿಸಿದಳು. ಅವಳು ಪಾತಿವ್ರತ್ಯ ಮಹಿಮೆಯನ್ನು ಲೋಕದಲ್ಲಿ ಬಿತ್ತರಿಸುವ ಸಲುವಾಗಿ, ಮಹಾವಿಷ್ಣುವು ತನ್ನ ಅಂಶದಿಂದ ಶರಭ ಮಹರ್ಷಿಯಾಗಿ ಜನ್ಮ ತಾಳಿ ನಳಾಯಿನಿಯನ್ನು ಮದುವೆ ಆದನು.

ಈ ಮಹರ್ಷಿಯು, ಅತಿ ಕಾಮುಕನಾಗಿ ವಿಷಯ ಚಂಚಲನಾಗಿ, ಅತಿಚೆಲುವೆಯರಾದ ವೇಶ್ಯಾ ಸ್ತ್ರೀಯರ ಸಂಗ ಮಾಡುತ್ತಾ, ಅತಿದಾರುಣವಾದ ರೋಗದಿಂದ ಪೀಡಿತನಾಗಿದ್ದನು. ಒಮ್ಮೆ ಶರಭ ಮಹರ್ಷಿಯು ಆ ಊರಿನ ಅತಿ ಚೆಲುವೆ ಎನಿಸಿದ್ದ ಒಬ್ಬ ವೇಶ್ಯೆಯ ಸಂಗ ಮಾಡಬೇಕೆಂದು, ತನ್ನ ಸತಿಯಾದ ನಳಾಯಿನಿಯೊಡನೆ ಹೇಳಿದನು, ನಳಾಯಿನಿ ಯಾದರೋ ಪತಿಪರಾಯಣಳಾಗಿ, ಸೇವೆ ಮಾಡುತ್ತಿದಳು. ತನ್ನ ಪತಿಯ ಆಸೆಯನ್ನು ನಡೆಸುವ ಸಲುವಾಗಿ ಆ ವೇಶ್ಯೆಯ ಮನ ಒಲಿಸಲು ಪ್ರತಿ ದಿನ ಸೂರ್ಯ ಉದಯವಾಗುವ ಮೊದಲು ಆ ವೇಶ್ಯೆಯ ಮನೆ ಬಾಗಿಲನ್ನು ಸಾರಿಸಿ ಗುಡಿಸಿ ರಂಗವಲ್ಲಿ ಇಟ್ಟು ಬರುತ್ತಿದ್ದಳು.

ಆ ವಿಷಯ ತಿಳಿದ ವೇಶ್ಯೆಯು, ನಳಾಯಿನಿಯನ್ನು ಕರೆಸಿ ಅವಳ ಸೇವೆಗೆ ಇಂಗಿತವೇನು ? ಎಂದು ಕೇಳಿದಾಗ ತನ್ನ ಪತಿಯ ಆಶಯವನ್ನು ತಿಳಿಸಿದಳು. ನಳಾಯಿನಿಯ ಈ ಸುಗುಣವನ್ನು ಕಂಡು ಹರ್ಷಿಸಿದ, ಆ ವೇಶ್ಯೆಯು ತನ್ನ ಒಪ್ಪಿಗೆಯನ್ನಿತ್ತಳು.

ಪ್ರತಿದಿನ ರಾತ್ರಿ ತನ್ನ ಪತಿ ನಡೆಯಲಾರದೆ ದಾರುಣ ರೋಗದಿಂದ ನರಳುತ್ತಿದ್ದದ್ದರಿಂದ ಒಂದು ಹೆಡಿಗೆಯಲ್ಲಿ ಕೂರಿಸಿಕೊಂಡು ಅವನನ್ನು ವೇಶ್ಯೆಯ ಮನೆಗೆ ತಲ್ಪಿಸಿ, ಹೊತ್ತು ಹುಟ್ಟುವ ಮೊದಲು ಹೋಗಿ ಕರೆತರುತ್ತಿದ್ದಳು.



# ಸತಿ ನಳಾಯಿನಿ

ವಿಮಲಾ ರಾಘವೇಂದ್ರ

ಹೀಗಿರಲಾಗಿ ಒಂದು ದಿನ ರಾತ್ರಿ ಪತಿಯ ಹೆಡಿಗೆ ಹೊತ್ತು ನಡೆಯುತ್ತಿರುವಾಗ, ಆ ದಾರಿಯಲ್ಲಿ ತಲೆ ಕೆಳಗಾಗಿ ಮರದ ಕೊಂಬೆಯೊಂದರಿಂದ ಜೋತಾಡುತ್ತಾ, ತಪಸ್ಸು ಮಾಡುತ್ತಿದ್ದ ಮಾಂಡವ್ಯ ಮುನಿಗೆ ಶರಭ ಮಹರ್ಷಿಯ ಕೈ ತಗುಲಿ ಅವರ ತಪಸ್ಸು ಭಂಗವಾಯಿತು. ಇದರಿಂದ ಮುನಿದ ಮಾಂಡವ್ಯ ಮಹರ್ಷಿಗಳು, 'ತನ್ನ ತಪಸ್ಸು ಭಂಗಪಡಿಸಿದವರ ತಲೆ ಸೂರ್ಯ ಉದಯವಾದೊಡನೆ ಸಹಸ್ರ ಹೋಳಾಗಲಿ' ಎಂದು ಶಾಪಕೊಟ್ಟರು.

ಇದನ್ನು ಕೇಳಿಸಿಕೊಂಡ ನಳಾಯಿನಿ, ತನ್ನ ಪಾತಿವ್ರತ್ಯ ಮಹಿಮೆಯಿಂದ ಸೂರ್ಯನು ಉದಯಿಸದಂತೆ ತಡೆದಳು, ಇದರಿಂದ ಮೂರು ಲೋಕಗಳೂ ತಲ್ಲಣಗೊಂಡು ಉಲ್ಲೋಲ ಕಲ್ಲೋಲವಾಯಿತು. ಆದ್ದರಿಂದ ದೇವತೆಗಳೆಲ್ಲಾ ಬಂದು ನಳಾಯಿನಿಯಲ್ಲಿ ಸೂರ್ಯನು ಉದಯಿಸುವಂತೆ ಮಾಡಬೇಕೆಂದು ಪ್ರಾರ್ಥಿಸಿದರು. ಆಗ ಶರಭ ಮಹರ್ಷಿಯು ತನ್ನ ಸತಿಗೆ ಶಾಪ ಹಿಂತೆಗೆದು ಕೊಳ್ಳುವಂತೆ ಹೇಳಲಾಗಿ, ತನ್ನ ಗಂಡನ ಮಾತಿನಂತೆ ಸೂರ್ಯನಿಗೆ ಉದಯಿಸಲು ಅನುಮತಿ ಇತ್ತು, ತನ್ನ ಪತಿಯ ಪ್ರಾಣ ರಕ್ಷಣೆಗಾಗಿ ಅಲ್ಲೇ ಮೂರು ಮರಳಿನ ಉಂಡೆಗಳನ್ನು ಮಾಡಿ ಬ್ರಹ್ಮ, ವಿಷ್ಣು

ಮಹೇಶ್ವರರನ್ನು ಆಹ್ವಾನಿಸಿ ತಪಸ್ಸು ಮಾಡತೊಡಗಿದಳು.

ಅವಳ ತಪಸ್ಸಿಗೆ ಮೆಚ್ಚಿದ ತ್ರಿಮೂರ್ತಿಗಳು, ಪ್ರತ್ಯಕ್ಷರಾಗಿ ವರ ಬೇಡೆಂದು ಹೇಳಲು "ಪತಿಂದೇಹಿ", "ಪತಿಂದೇಹಿ" ಎಂದು ಐದುಸಲ ಪ್ರಾರ್ಥಿಸಿದಳು. ಆಗ ಪ್ರತಿ ಬಾರಿಗೂ 'ಅಸ್ತು, ಅಸ್ತು' ಎಂದು ಹರಸುತ್ತಾರೆ. ಆದರೆ ಈ ಜನ್ಮದಲ್ಲಿ ಈ ಯುಗದಲ್ಲಿ ಐವರು ಪತಿಯರು ಸಾಧ್ಯವಿಲ್ಲವೆಂದೂ; ದ್ವಾಪರದಲ್ಲಿ ಐವರು ಪತಿಯರು ಆಗಲೆಂದೂ ವರಕೊಡುತ್ತಾರೆ.

ಆದರಿಂದ ಸತಿ ನಳಾಯಿನಿ ದ್ವಾಪರ ಯುಗದಲ್ಲಿ ದ್ರೌಪದಿಯಾಗಿ ಜನಿಸಿ ಐವರು ಪತಿಗಳು ಅಂದರೆ ಪಾಂಡವರೈವರನ್ನು ಪತಿಗಳಾಗಿ ಪಡೆಯುತ್ತಾಳೆ.

ಇದರ ಸಂಕೇತವಾಗಿ ಈಗಲೂ ಬೆಂಗಳೂರಿನಲ್ಲಿ ಧರ್ಮರಾಯನ ದೇವಸ್ಥಾನದಲ್ಲಿ ನಳಾಯಿನಿ ಪ್ರತಿಷ್ಠಾಪಿಸಿ ಪೂಜಿಸಿದ ತ್ರಿಮೂರ್ತಿಗಳನ್ನು ಕರಗದ ದಿನ ಪೂಜಿಸ್ತಾರೆ.

ಈ ದೇವಸ್ಥಾನದ ಗರ್ಭಗುಡಿಯಲ್ಲಿ ಒಂದು ಪೀಠವಿದ್ದು, ಅದನ್ನು ಆದಿಶಕ್ತಿ ಪೀಠ ಎಂದು ಕರೆಯುತ್ತಾರೆ.

ಇದರ ಸುತ್ತಲೂ ಭೀಮಾರ್ಜುನರಾದಿಯಾಗಿ ಪಾಂಡವರೈವರ ವಿಗ್ರಹಗಳೂ ಪ್ರತಿಷ್ಠಾಪಿತವಾಗಿರುವುದನ್ನು ಕಾಣಬಹುದಾಗಿದೆ.

---

# ಕೈತವದ ಕೂಸು

— ಮಾತಂಗಿ

ಕೂಸೊಂದು ಮಲಗಿದೆ ಇಲ್ಲಿ
ಕೂಸೊಂದು ಮಲಗಿದೆ ... ...
ಯೋಗಿಗಳೆಲ್ಲರೂ ತಾವ್ ತಪಗೈದು
ಜಗಕೆ ಹೆತ್ತು ಇತ್ತಿಹ ಕೂಸು
ರವಿ ಶಶಿದ್ವಯರನೆ ಕಣ್ಣಾದ ಕೂಸು
ಭಕ್ತಿಯ ಹೂಗಳ ಹೊದ್ದಿಹ ಕೂಸು
ಭೋಗಿಯ ಕರಗಿ ಯೋಗಿ ತಾನಾಗಿ
ಸುಷುಪ್ತಿಗೈದಿಹ ಮುದ್ದಾದ ಕೂಸು
ತಾನು ಮಲಗಿ ಎಲ್ಲರ ತೂಗುತ
ನಗಿಸುತ, ಅಳಿಸುವ ಕೈತವ ಕೂಸು
ಧರೆಯ ರಂಗದಿ ಎಲ್ಲರ ಆಡಿಸಿ
ತನ್ನೆಡೆಯತ್ತ ಸೆಳೆಯುವ ಕೂಸು
ರಂಗಾ ಎಂಬ ಕೂಗಿದ ಕರೆಗೆ
ರಂಗನಾಥನೆ ಆಗಿ ಬಂದಿಹ ಕೂಸು.........
ಕೂಸೊಂದು ಮಲಗಿದೆ ಇಲ್ಲಿ...............



## ಗಮನಿಕೆ

ವಿವಿಧಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ, ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ. ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ.

* ಸಪ್ತಗಿರಿಯನ್ನು ಕೋರುವವರು ಪ್ರತಿ ತಿಂಗಳಿನಲ್ಲಿ 15 ನೆ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು. ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ.

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸಚಂದಾ' ಎಂದು ಬರೆಯಬೇಕು. ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು. ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ.

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು.

**ವೆಲ್‌ಫೇರ್ ಆಫೀಸರ್,**
ಪಬ್ಲಿಕೇಷನ್ ಸೆಕ್ಷನ್
ಟಿ. ಟಿ. ಡಿ.
ತಿರುಪತಿ–517501

( 8ನೇ ಪುಟದಿಂದ)

ತ್ಯಾಗರಾಜರು ರಚಿಸಿದ ಕೃತಿಗಳ ಸಂಖ್ಯೆ ಅಪಾರ. ಸುಮಾರು 24000 ಕೃತಿಗಳನ್ನು ರಚಿಸಿರಬಹುದೆಂದು ಅಂದಾಜು ಮಾಡಲಾಗಿದೆ. ಹಾಡುಗಳಿಗೆ ಸ್ವರ ಸಂಚಾರವನ್ನೂ, ಸಂಗತಿ ಹಾಕುವ ಕ್ರಮವನ್ನೂ ತ್ಯಾಗರಾಜರು ರೂಢಿಗೆ ತಂದರು. ಶ್ರೀರಾಮಚಂದ್ರನ ದಿವ್ಯಚರಿತ್ರೆ, ಅವನ ಗುಣಗಾನ–ಇವುಗಳನ್ನು ಒಳಗೊಂಡಿವೆ ಅವರ ಕೃತಿಗಳು. ಕೃತಿಗಳಲ್ಲಿ ರಾಮಚಂದ್ರ ಪರವಾದ ಅವರ ಭಕ್ತಿ ನಿಚ್ಚಳವಾಗಿ ಮೂಡಿ ನಿಂತಿದೆ. ಬಹುಧಾರಿ, ದೇವಾಮೃತ ವರ್ಷಿಣಿ, ಗಂಭೀರವಾಣಿ, ಜನರಂಜನಿ, ನಭೋಮಣಿ, ನವರಸ, ಕನ್ನಡ– ಮೊದಲಾದ ಅಪೂರ್ವ ರಾಗಗಳಲ್ಲಿ ಕೃತಿರಚನೆ ಮಾಡಿದ್ದಾರೆ ತ್ಯಾಗರಾಜರು.

ಭಕ್ತನ ನಾನಾವಿಧ ಭಕ್ತಿಭಾವಗಳನ್ನು, ಭಾಗವತಭಕ್ತಿಯ ಪ್ರತಿಬಿಂಬವೆನಿಸಿರುವ ತ್ಯಾಗರಾಜರ ಕೃತಿಗಳಲ್ಲಿ ಕಾಣಬಹುದು. ದೇವರ ದರ್ಶನಾಕಾಂಕ್ಷಿಯಾಗಿ ಭಕ್ತನಿರುವುದು ಸಹಜ. ದರ್ಶನ ದೊರಕದಿದ್ದಾಗ, "ಎಟುಲ ಬ್ರೋತುವೋ ತೆಲಿಯಾ" ಎಂದು, ಹೇಗೆ ರಕ್ಷಿಸುವೆಯೋ ತಿಳಿಯದು ಎಂಬ ತೊಳಲಾಟವೂ, "ತೆಲಿಯಲೇರು ರಾಮ ಭಕ್ತಿ ಮಾರ್ಗಮುನು" ಎಂದು, ಭಕ್ತಿ ಮಾರ್ಗವು ತಿಳಿಯದೆಂಬ ಪೇಚಾಟವೂ, "ಅನ್ಯಾಯಮು ಸೇಯಕುರಾ–ರಾಮಾ" ಎಂಬ ಕೃತಿಯಲ್ಲಿ ನನ್ನ ವಿಚಾರದಲ್ಲಿ ಅನ್ಯಾಯ ಮಾಡಬೇಡ ಎಂಬ ಪ್ರಾರ್ಥನೆಯೂ, "ಅನಾಥುಡನು ಗಾನು ರಾಮ ನೇ" ಎಂಬ ಕೃತಿಯಲ್ಲಿ, ನಾನು ಅನಾಥನಲ್ಲ ನನಗೆ ತಂದೆಯಾಗಿ ರಾಮನಿದ್ದಾನೆ ಎಂಬ ವಿಶ್ವಾಸಪೂರ್ವಕ ಸ್ತುತಿಯೂ, "ಎಂತ ಮುದ್ದೋ–ಎಂತ ಸೊಗಸೋ" ಎಂದು ಶ್ರೀ ರಾಮನ ರೂಪವರ್ಣನೆಯೂ, "ಎಂದುಕು ದಯ ರಾದುರಾ – ಶ್ರೀರಾಮಚಂದ್ರ ನೀ" ಎಂದು ರಾಮನ ಕೃಪೆಗಾಗಿ ಹಂಬಲಿಸುವಿಕೆಯೂ, "ಎನ್ನಡು ಜೂತುನು ಇನಕುಲ ತಿಲಕುನಿ" ಎಂದು ರಾಮದರ್ಶನಾಪೇಕ್ಷೆಯನ್ನೂ, "ಏಲಾ ನೀದಯ ರಾದು ಪರಾಕು ಜೇಸೇದವೇಲ ಸಮಯಮು ಕಾದು" ಎಂದು, ಉಪೇಕ್ಷೆಗೆ ಇದು ಸಮಯವಲ್ಲ, ದಯೆತೋರು ಎಂದು ಬೇಡುವುದೂ, ದರ್ಶನ ಭಾಗ್ಯ ದೊರೆತಾಗ, "ಕೊಲುವಮರೆಗದಾ– ಕೋದಂಡಪಾಣಿ" ಎಂದು, ಯಾರಿಗೂ ದೊರೆಯದ ಸೇವೆಯ ಭಾಗ್ಯ ದೊರೆಯಿತೆಂದು ಹರ್ಷಿಸುವುದೂ, "ಚಲ್ಲರೇ ರಾಮಚಂದ್ರುನಿ ಪೈನಿ ಪೂಲ" ಎಂದು, ರಾಮಚಂದ್ರನ ಮೇಲೆ ಹೂಗಳನ್ನು ಎರಚಿರಿ ಎಂದು, "ತವದಾಸೋಹಂ, ತವದಾಸೋಹಂ, ತವದಾಸೋಹಂ ದಾಶರಥೇ" ಎಂದು ದಾಸ್ಯ ಭಕ್ತಿಯಿಂದ ಸ್ತುತಿಸುವುದೂ, "ನನ್ನು ವಿಡಚಿ ಕದಲಕುರಾ–ರಾಮ" ಎಂಬ ಕೃತಿಯಲ್ಲಿ, ಶ್ರೀರಾಮ ನನ್ನನ್ನು ಬಿಟ್ಟು ಹೋಗಬೇಡ ಎಂಬ ಬೇಡಿಕೆಯೂ ಇರುವಂತೆಯೇ ಭಕ್ತಿ ಭಾವಗಳನ್ನೊಳಗೊಂಡ ಅನೇಕ ಕೃತಿಗಳಿವೆ. ಅಲ್ಲದೆ, ಮತಭೇದ ಖಂಡನೆ, ದೇವರನ್ನು ಭಜಿಸಿರೆಂದು ಉಪದೇಶ, ಅಂತರಂಗ ಬಹಿರಂಗ ಶುದ್ಧಿಗಳ ಬಗ್ಗೆ ಜನರಿಗೆ ನೀಡಿದ ತಿಳುವಳಿಕೆ ಮೊದಲಾದ ವಿಚಾರಗಳನ್ನು ಒಳಗೊಂಡ ಕೃತಿಗಳೂ ಇವೆ.

ತ್ಯಾಗರಾಜರು ರಚಿಸಿರುವ ಪಂಚರತ್ನ ಕೃತಿಗಳು ಕರ್ನಾಟಕ ಸಂಗೀತಕ್ಕೆ ರತ್ನ ಕಾಂತಿಯನ್ನು ನೀಡಿವೆ. ನಾಟರಾಗದ "ಜಗದಾನಂದ ಕಾರಕ" ಗೌಳರಾಗದ "ದುಡುಕುಗಲ", ಆರಭಿರಾಗದ "ಸಾಧಿಂಚನೇ", ಶ್ರೀರಾಗದ "ಎಂದರೋ ಮಹಾನುಭಾವುಲು" ಮತ್ತು ವರಾಳಿರಾಗದ "ಕನಕನ ರುಚಿರಾ"–ಈ ಐದು ಕೃತಿಗಳೂ ಸಂಗೀತ ಪ್ರಪಂಚದಲ್ಲಿ ವಿಶೇಷ ಗೌರವಕ್ಕೆ ಪಾತ್ರವಾಗಿವೆ. ಐದು ಕೃತಿಗಳೂ ಆದಿತಾಳದಲ್ಲಿವೆ ಅವುಗಳ ಸಂಗೀತ ಮಾಧುರ್ಯಕ್ಕೆ, ಸಾಹಿತ್ಯ ಪ್ರೌಢಿಮೆಗೆ, ಕವಿತಾವೈಖರಿಗೆ ಬೆರಗಾಗದವರಿಲ್ಲ.

ತ್ಯಾಗರಾಜರು "ಆಧುನಿಕ ಗೇಯ ನಾಟಕ ಜನಕ" ಎಂಬ ಕೀರ್ತಿಯನ್ನು ಪಡೆದಿದ್ದಾರೆ. ಗೇಯ ನಾಟಕವೆಂದರೆ ಸಂಗೀತ ನಾಟಕಗಳು. ತ್ಯಾಗರಾಜರು ಮೂರು ಗೇಯ ನಾಟಕಗಳನ್ನು ಬರೆದಿದ್ದಾರೆ. 1. ಪ್ರಹ್ಲಾದ ಭಕ್ತವಿಜಯ 2. ನೌಕಾ ಚರಿತ್ರೆ 3. ಸೀತಾರಾಮ ವಿಜಯ. ಅವುಗಳಲ್ಲಿ ಸೀತಾರಾಮ ವಿಜಯ ದೊರೆತಿಲ್ಲ. ಗೇಯ ನಾಟಕಗಳು ತ್ಯಾಗರಾಜರ ಆಳವಾದ ಶಾಸ್ತ್ರಜ್ಞಾನಕ್ಕೂ, ಅದ್ವಿತೀಯ ಪಾಂಡಿತ್ಯಕ್ಕೂ, ರಚನಾ ಕೌಶಲ್ಯಕ್ಕೂ ಸಾಕ್ಷಿಯಾಗಿವೆ.

ಕರ್ನಾಟಕ ಸಂಗೀತ ಕಛೇರಿಗಳಲ್ಲಿ 'ಕೃತಿ' ಗಳಿಗೆ ಪ್ರಮುಖಸ್ಥಾನವನ್ನು ತಂದುಕೊಡಲು ಮುಖ್ಯ ಕಾರಣರಾದವರು ತ್ಯಾಗರಾಜರು. ಇಂದಿಗೂ ಅವರು ತಮ್ಮ ಕೃತಿಗಳ ಮೂಲಕ ಜನಮನದಲ್ಲಿ ಚಿರಸ್ಥಾಯಿಯಾಗಿ ಉಳಿದಿದ್ದಾರೆ. ಇಂದಿಗೂ ಪ್ರತಿವರ್ಷವೂ ತಿರುವೈಯಾರಿನಲ್ಲಿ ತ್ಯಾಗರಾಜ ಆರಾಧನೆ ನಡೆಯುತ್ತಿದೆ.



( 6ನೇ ಪುಟದಿಂದ )

ತೀರ್ಥದ ಉತ್ಸವದಲ್ಲಿಯೂ, ಕೃಷ್ಣರಾಜ ಮುಡಿ'ಯನ್ನು ಆಷಾಢಮಾಸ(ಚಿಕ್ಕಜಾತ್ರೆ) ದಲ್ಲಿ ನಾಲ್ಕು ದಿನ ಧಾರಣೆ ಮಾಡಿಸಿ ಉತ್ಸವಗಳನ್ನು ಆಚರಿಸುತ್ತಾರೆ. ಇಷ್ಟೇ ಅಲ್ಲದೆ 'ವೈರಮುಡಿ' ಉತ್ಸವವಾದ ನಂತರವೇ 'ರಾಜಮುಡಿ'ಯನ್ನು ದೇವರಿಗೆ ತೊಡಿಸಿ ಭಕ್ತರಿಗೆ ತೀರ್ಥ ಪ್ರಸಾದ ನೀಡುವುದುಂಟು.

ಈ ಕ್ಷೇತ್ರದ ಮತ್ತೊಂದು ದೇವರು ಶ್ರೀ ಯೋಗ ನರಸಿಂಹಸ್ವಾಮಿ. ಬೆಟ್ಟದ ಮೇಲೆ ಯೋಗಾರೂಢನಾಗಿ, ಯೋಗಮುದ್ರೆಯಲ್ಲಿ ಕುಳಿತಿರುವ ಸ್ವಾಮಿಯು ಅನೇಕರಿಗೆ ಕುಲದೈವವಾಗಿ, ಭಕ್ತರ ಅಭೀಷ್ಟಗಳನ್ನು ನೆರವೇರಿಸುತ್ತಾ ರಾರಾಜಸುತ್ತಿರುವುದನ್ನು ಕಾಣಬಹುದು. ಹಿಂದೆ ಪ್ರಹ್ಲಾದನಿಗೆ ಪ್ರತ್ಯಕ್ಷನಾದ ಸ್ವಾಮಿಯು ತನ್ನ ಶಾಂತಿಗಾಗಿ, ಬೆಟ್ಟದಲ್ಲಿ ಕುಳಿತಿದ್ದಾನೆನ್ನಲು ಈ ನರಸಿಂಹ ಗಿರಿ ಸಾಕ್ಷಿಯಾಗಿ ನಿಂತಿದೆ. ಈ ನರಸಿಂಹಗಿರಿಗೆ ಟಿಪ್ಪು ಸುಲ್ತಾನನಿಂದ ಕೊಡುಗೆಯಾಗಿ ನಗಾರಿಗಳೂ, ಹಾಗೂ ಶ್ರೀ ಪರಕಾಲ ಮಠದ ವತಿಯಿಂದ ದೊಡ್ಡ ಗಂಟೆಯೂ ಸಂದಿವೆ. ನರಸಿಂಹಗಿರಿಯ ಮಧ್ಯದಲ್ಲಿ 'ಪಾಂಡವರ ಗುಹೆ, 'ಪಾಂಡವರ ಮೆಟ್ಟಿಲು' ಇವೆ. ಇವು ಪಾಂಡವರು ಅಲ್ಲಿಗೆ ಬಂದಿದ್ದಾರೆಂಬುದಕ್ಕೆ ಸಾಕ್ಷಿಯಾಗಿವೆ. ಗಿರಿಯ ಬುಡದಲ್ಲಿ ಬಂಡೆ ಗಣಪತಿ ಇದೆ. ಬೆಟ್ಟದ ಗೋಪುರ ನಿಲ್ಲುವುದಕ್ಕೆ ಈ ಗಣಪತಿಯೇ ಕಾರಣವೆಂದು ಹೇಳುತ್ತಾರೆ.

ನರಸಿಂಹ ಗಿರಿಯ ತಟದಲ್ಲಿ 'ಕಲ್ಯಾಣಿ' (ಪುಷ್ಕರಣಿ) ಯೊಂದಿದೆ. ಶ್ರೀಮನ್ ನಾರಾಯಣನು ಪಾತಾಳದಲ್ಲಿ ಹುದುಗಿದ್ದ ಭೂಮಿಯನ್ನು ವರಾಹರೂಪಿಯಾಗಿ ತೆಗೆದುಕೊಂಡು ಬರುತ್ತಿರುವಾಗ ಅವನ ಶರೀರದಿಂದ ಉಂಟಾದ ಜಲವೇ ಈ 'ಕಲ್ಯಾಣಿ ತೀರ್ಥ' ಎಂದು ಪ್ರತೀತಿ. ಸಕಲ ಪಾಪ ಪರಿಹಾರವೂ ಈ ನೀರಿನಲ್ಲಿ ಸ್ನಾನಮಾಡಿದಲ್ಲಿ ಆಗುತ್ತದೆಯೆಂಬ ನಂಬಿಕೆಯಿದೆ. ಇಲ್ಲಿ ವರಾಹಮೂರ್ತಿ ದೇವಸ್ಥಾನವಿದ್ದು ಅನೇಕ ಮಠ, ಮಾನ್ಯಗಳಿವೆ.

ಶ್ರೀ ತಿರುನಾರಾಯಣ ಸ್ವಾಮಿಯ ದೇವಾಲಯದಲ್ಲಿ ಶ್ರೀಯದುಗಿರಿ ನಾಯಕಿಯ ಸನ್ನಿಧಿಯೂ, ಶ್ರೀ ರಾಮಾನುಜಾಚಾರ್ಯರ ಸನ್ನಿಧಿಗಳಿದ್ದು ಮತ್ತು ರಾಜ ರಾಣಿಯರ ವಿಗ್ರಹಗಳಿಂದ ಕಂಗೊಳಿಸಿದೆ. ಪುಣ್ಯಕ್ಷೇತ್ರವಾದ ಈ ಊರಿನಲ್ಲಿ ಕವಿತಾರ್ಕಿಕ ಕೇಸರಿ ಶ್ರೀ ವೇದಾಂತ ದೇಶಿಕರು ಹಾಗೂ ಶ್ರೀ ರಾಜೀಯರ್ ಸನ್ನಿದಿಗಳಿದ್ದು ಪ್ರತಿವರ್ಷ ಉತ್ಸವಾದಿಗಳು ಜರುಗುತ್ತವೆ.

ಇಂತಹ ಪುಣ್ಯಕ್ಷೇತ್ರ ಅಷ್ಟತೀರ್ಥಗಳನ್ನೊಳಗೊಂಡು ಅನೇಕ ಮಹರ್ಷಿಗಳ ತಪೋಧ್ಯಾನವಾಗಿ ಕಂಗೊಳಿಸಿ ಕೋಟೆ-ಕೊತ್ತಲಗಳನ್ನು ಹೊಂದಿರುವುದಲ್ಲದೆ ದೇವಸ್ಥಾನದ ಎದುರಿನಲ್ಲಿಯೇ ಬದರೀವೃಕ್ಷವನ್ನೂ, ಬದರೀನಾರಾಯಣ ಸ್ವಾಮಿಯ ಸನ್ನಿಧಿಯನ್ನು ಹೊಂದಿ 'ದಕ್ಷಿಣದ ಬದರೀ ಕ್ಷೇತ್ರ'ವೆಂಬ ಹೆಸರನ್ನು ಸಾರ್ಥಕಗೊಳಿಸಿದೆ.

ಇಂತಹ ಪುರಾತನ ದೇವಾಲಯದ ಕ್ಷೇತ್ರದಲ್ಲಿ ಸಾಹಿತ್ಯ, ವೇದಾಂತ, ಕಲೆ, ಸಂಗೀತ ಮುಂತಾದ ಸಾಂಸ್ಕೃತಿಕ ಕಾರ್ಯಕ್ರಮಗಳು ಆಗಾಗ ಜರುಗುತ್ತಿರುತ್ತವೆ.

---

# ಆರ್ಜಿತ ತೆಪ್ಪ ಉತ್ಸವ

ಸಾಧಾರಣವಾಗಿ ವರುಷಕ್ಕೊಂದು ಬಾರಿ 3 ದಿನಗಳ ಪರ್ಯಂತ ನಡೆಯುವ ಪ್ಲವೋತ್ಸವವಲ್ಲದೆ, ಭಕ್ತಜನರ ಸೌಕರ್ಯಕ್ಕಾಗಿ ದೇವಸ್ಥಾನದವರಿಂದ ಏರ್ಪಡಿಸಲ್ಪಟ್ಟ ಆರ್ಜಿತೋತ್ಸವ, ಈ ಪ್ಲವೋತ್ಸವ.

ಪ್ರತಿ ಮಂಗಳವಾರದಲ್ಲಿ, ಆರ್ಜಿತಸೇವೆಗಳನಂತರ, ಮಲಯಪ್ಪಸ್ವಾಮಿಯವರನ್ನು ದೇವೇರಿಗಳನ್ನು ಅಲಂಕರಿಸಿ, ಮಂಗಳ ವಾದ್ಯನಾದ, ವೇದಪ್ರಬಂಧ ಪಠನಾದಿಗಳ ನಡುವೆ ಅವರನ್ನು ಅಲಂಕೃತವಾದ ತೆಪ್ಪದ ಮೇಲೆ ಕುಳ್ಳಿರಿಸಿ, ಸ್ವಾಮಿ ಪುಷ್ಕರಿಣಿಯಲ್ಲಿ 3 ಪರ್ಯಾಯ ವಿಹಾರಯಾತ್ರೆ ಮಾಡಿಸುತ್ತಾರೆ.

ಈ ಮೂರು ಪ್ರದಕ್ಷಿಣೆಗಳ ಅನಂತರ ನಿವೇದನ; ಮಂಗಳ ನೀರಾಜನ ನಡೆದು ಸ್ವಾಮಿಯುವರು ದೇವೇರಿಗಳು ವಿವಿಧ ಮರ್ಯಾದೆಗಳೊಡನೆ ಆಲಯ ಪ್ರವೇಶ ಮಾಡುತ್ತಾರೆ.

ರೂ. 2500 ಸಲ್ಲಿಸಿದ ಗೃಹಸ್ಥರು ಈ ಸೇವೆ ಮಾಡಿಸಿ, ಸ್ವಾಮಿಯವರ ಪುಷ್ಕರಿಣೀ ವಿಹಾರವನ್ನು ಮೆಟ್ಟಿಲ ಮೇಲಿದ್ದು ನೋಡಬಹುದು. ಗೃಹಸ್ಥರಿಗೆ ವಸ್ತ್ರ ಬಹುಮಾನ, ಪ್ರಸಾದವಿನಿಯೋಗಗಳಲ್ಲದೆ, ಸ್ವಾಮಿಯವರ ಆಕೃತಿವುಳ್ಳ 5 ಗ್ರಾಂ ತೂಕದ ಬಂಗಾರದ ಪದಕ ಕೊಡಲ್ಪಡುತ್ತದೆ, ಅವರಿಗೆ ಸಂಬಂಧಿಸಿದ 10 ಜನರನ್ನು ದರ್ಶನಕ್ಕೆ ಅನುಮತಿಸಲಾಗುತ್ತದೆ.

ತಿರುಮಲೆ ತಿರುಪತಿ ದೇವಸ್ಥಾನ.

( 22 ನೇ ಪುಟದಿಂದ )

ತೆಗೆದು ಕೊಂಡು, ಅದಕ್ಕೆ ಸುದರ್ಶನದ ಶಕ್ತಿಯನ್ನಿತ್ತು ಅದರಿಂದ ಅವನ ಶಿರಚ್ಛೇದನ ಮಾಡಿ ಆ ತಾಯಿಯ ನಿರೀಕ್ಷಣೆಯನ್ನು ಸುಳ್ಳುಮಾಡಿದನು.

ಬೋರೆಯ ಹಣ್ಣಿನ ಮುಖಾಂತರವಾಗಿ ಅಭೇದ್ಯವಾದ ಪರೀಕ್ಷಿತ್‌ರಾಜನ ಅರಮನೆಯನ್ನು ಸರ್ಪವೊಂದು ಪ್ರವೇಶಿಸಿ ಅವನ ಪ್ರಾಣವನ್ನು ತೆಗೆದುಕೊಂಡಿತು. ಯಾವ ಸಜೀವ ಪ್ರಾಣಿಯಿಂದಲೂ ತನ್ನ ಮರಣವು ಸಂಭವಿಸಬಾರದೆಂಬ ವರವನ್ನು ಬಲಾಢ್ಯನಾದ ರಾವಣನು ಬ್ರಹ್ಮನಿಂದ ಪಡೆದಿದ್ದನು. ಆದರೆ ಅವನಿಗೆ ಮಾನವನ ಬಗ್ಗೆ ಸಾಕಷ್ಟು ಕಳಕಳಿ ಇಲ್ಲದುದರಿಂದ ತನ್ನ ಪಟ್ಟಿಯಲ್ಲಿ ಮಾನವನ ಹೆಸರನ್ನು ಸೇರಿಸುವುದನ್ನೇ ಮರೆತು ಬಿಟ್ಟಿದ್ದನು. ಪರಮಾತ್ಮನು ರಾಮನ ರೂಪದಲ್ಲಿ ಅವತರಿಸಿ ಅವನನ್ನು ಸಂಹರಿಸಿದ ಬಗೆಯನ್ನು ಎಲ್ಲರೂ ಬಲ್ಲರು.

ಯಾರ ತಲೆಯ ಮೇಲೆ ಭಸ್ಮಾಸುರನು ಕೈ ಇಡುವನೋ ಅವರು ಕೂಡಲೇ ಸುಟ್ಟು ಬೂದಿಯಾಗುವುದನ್ನು ಈಶ್ವರನು ವರವಾಗಿತ್ತಿದ್ದನು. ಅಸುರರ ವಿಶೇಷವಾದ ಕೃತಘ್ನತಾ ಬುದ್ಧಿಗನುಗುಣವಾಗಿ ಅವನಿಗೆ ದೊರೆತ ವರದ ಪರೀಕ್ಷೆ ಮಾಡಲೋಸುಗ ಭಸ್ಮಾಸುರನು ಶಿವನ ತಲೆಯ ಮೇಲೆಯೇ ಕೈಯನ್ನಿಟ್ಟು ಪರೀಕ್ಷಿಸಲು ಹವಣಿಸಿದನು. ತನ್ನ ಜೀವವನ್ನು ಉಳಿಸಿಕೊಳ್ಳಲು ಆಗ ಶಿವನು ವಿಷ್ಣುವಿನ ಆಶ್ರಯವನ್ನು ಪಡೆದನು. ಕೂಡಲೇ ವಿಷ್ಣುವು ಮೋಹಿನಿಯ ರೂಪ ತಾಳಿ ಭಸ್ಮಾಸುರನೆದುರಿಗೆ ಪ್ರತ್ಯಕ್ಷನಾದನು. ಮೋಹಿನಿಯ ಮನಮೋಹಕ ರೂಪಕ್ಕೆ ಮರುಳಾದ ಅಸುರನು ತಾನು ಶಿವನನ್ನು ಬೆನ್ನಟ್ಟಿ ಬಂದುದನ್ನು ಮರೆತು ಆಕೆಯನ್ನು ಕುರಿತು ತನ್ನನ್ನು ವರಿಸಬೇಕೆಂದು ಕೇಳಿದನು. ತಾನು ನರ್ತಿಸಿದಂತೆಯೇ ನರ್ತಿಸಿದರೆ ಮಾತ್ರ ಅವನನ್ನು ವಿವಾಹವಾಗುವುದಾಗಿ ಮೋಹಿನಿಯು ಸೂಚಿಸಿದಳು. ಅದಕ್ಕೆ ಸಮ್ಮತಿಸಿದ ಅಸುರನು ಅವಳಂತೆ ಅಂಗಾಂಗಗಳ ಚಲನವಲನಗಳನ್ನು ಅನುಕರಿಸುತ್ತಾ ಹೋಗಿ ಒಂದು ಕ್ಷಣದ ಸಮಯದಲ್ಲಿ ತನ್ನ ಕೈಯನ್ನು ತಲೆಯ ಮೇಲೆಯೇ ಇಟ್ಟುಕೊಂಡು ಸುಟ್ಟು ಬೂದಿಯಾಗಿ ಬಿದ್ದನು.

ಅತ್ಯಂತ ಪರಿಪಕ್ವವಾದ ಬುದ್ಧಿವಂತಿಕೆಯಿಂದ ಎಂದೆಂದಿಗೂ ಮರಣವನ್ನೂ ತಪ್ಪಿಸಿಕೊಳ್ಳಲು ಪ್ರಯತ್ನಿಸಿದವರಲ್ಲಿ ಹಿರಣ್ಯಕಶಿಪು ಪ್ರಮುಖನೆನಿಸಿಕೊಳ್ಳುತ್ತಾನೆ. ವರವನ್ನು ಬೇಡುವ ಸುಸಮಯ ಪ್ರಾಪ್ತವಾದಾಗ ಅವನು ಸಿದ್ಧಪಡಿಸಿದ ಕರಾರುಗಳ ಪಟ್ಟಿಯನ್ನು ಗಮನಿಸಿ:– ಮರಣದ ಸಮಯ ರಾತ್ರಿಯೂ ಆಗಬಾರದು, ಹಗಲೂ ಆಗಬಾರದು, ಒಳಗೂ ಆಗಬಾರದು, ಹೊರಗೂ ಆಗಬಾರದು, ಸಾಧನವು ಮೃದುವೂ ಆಗಿರಬಾರದು, ಕಠಿಣವಾಗಿಯೂ ಇರಬಾರದು, ಒಣಗಿದ್ದೂ ಆಗಿರಬಾರದು. ಹಸಿಯದೂ ಆಗಿರಬಾರದು, ತನ್ನನ್ನು ಕೊಲ್ಲುವವನು ಮಾನವನಾಗಿರಬಾರದು, ಪಶುವಾಗಿರಬಾರದು, ಯೋನಿಜನಾಗಿರಬಾರದು, ತಾನು ನೆಲದ ಮೇಲೂ ಸಾಯಬಾರದು, ಗಾಳಿಯಲ್ಲಿಯೂ ಸಾಯಬಾರದು. ಆದರೆ ಈ ಎಲ್ಲ ಕರಾರುಗಳಿಗೆ ಭಂಗ ಬಾರದಂತೆ ನರಸಿಂಹನ ರೂಪದಲ್ಲಿ ಮೃತ್ಯುವು ಬಂದು ನಖಗಳಿಂದ ಅವನ ಮರಣನ್ನುಂಟು ಮಾಡಿತು. ಬಲಿಚಕ್ರವರ್ತಿಯು ವಿಷ್ಣುವಿನ ಮಹಾಭಕ್ತನಾಗಿ ಚಿರಂಜೀವತ್ವವನ್ನು ಪಡೆದನು.

ಈ ಎಲ್ಲ ಕಾರಣಗಳ ಬಗ್ಗೆ ಸ್ವಲ್ಪ ವಿಚಾರ ಮಾಡಿದಾಗ ಸ್ವಾಭಾವಿಕವಾಗಿಯೇ ಒಂದು ತತ್ತ್ವ ಮೇಲೆದ್ದು ಕಾಣುತ್ತದೆ, ಒಂದು ಘಟನೆಯನ್ನು ಪರಿಗಣಿಸಿದಾಗ ಮರಣವು ಸ್ವಇಚ್ಛೆಯಿಂದ, ಸ್ವಇಚ್ಛೆಯಂತೆ ಬರುತ್ತದೆ ಎಂಬುದು. ತನ್ನ ತಂದೆಯಿಂದ ಇಂಥ ವರವನ್ನು ಪಡೆದ ಭೀಷ್ಮಾಚಾರ್ಯನ ಜೀವನಾವಸಾನದಂತೆ ಈ ವಿಷಯ ಕಂಡು ಒರುತ್ತದೆ. ತನ್ನ ತಂದೆಯ ಸಲುವಾಗಿ ಭೀಷ್ಮನು ತನ್ನ ವೈವಾಹಿಕ ಜೀವನಕ್ಕೆ ತಿಲಾಂಜಲಿಯನ್ನಿತ್ತು ಅತ್ಯುನ್ನತ ಮಟ್ಟದ ತ್ಯಾಗವನ್ನು ಮಾಡಿದ ಫಲವಾಗಿ ಬಂದ ವರವು ಅದಾಗಿತ್ತು. ತನಗೆ ದೊರೆತ ಈ ಇಚ್ಛಾ ಮರಣದ ಫಲವಾಗಿ ತಾನು ಜೀವಿಸಬೇಕೆಂದು ಬಯಸುವವರೆವಿಗೆ ಒಳ್ಳೆಯ ಜೀವನ ನಡೆಸಿ ಯೋಗ್ಯ ಸಮಯದಲ್ಲಿ ತನ್ನ ಇಚ್ಛೆಯಂತೆಯೇ ಪ್ರಾಣ ತ್ಯಾಗವನ್ನು ಮಾಡಿದನು.

ಮಾರ್ಕಂಡೇಯ ಮುನಿಯು ಇನ್ನೊಬ್ಬ ಚಿರಂಜೀವಿಯು. ತನ್ನ ಜೀವನದ ದ್ವಿತೀಯ ದಶಕದಲ್ಲಿಯೇ ಸಾಯಲು ಹುಟ್ಟಿದವನು. ಅವನ ಮಾತಾ ಪಿತೃಗಳಿಗೆ ಪ್ರತ್ಯಕ್ಷನಾದ ದೇವರು – "ಅಯೋಗ್ಯನಾದ, ದುಷ್ಟನಾದ ದೀರ್ಘಾಯುಷಿಯಾದ ಮಗನು ಬೇಕೋ ಇಲ್ಲವೇ ಸದ್ಗುಣ ಸಂಪನ್ನನಾದ, ಕರ್ತವ್ಯಪರಿಪಾಲಕನಾದ ಅಲ್ಪಾಯುಷಿ ಬೇಕೋ" ಎಂದು ಕೇಳಿದಾಗ ಅವರು ಅಲ್ಪಾಯುಷಿಯಾದ ಮಗನನ್ನೇ ಅನುಗ್ರಹಿಸಲು ಪ್ರಾರ್ಥಿಸಿಕೊಂಡರು. ಮಗನ ಮರಣದ ಸಮಯವು ಸಮೀಪಿಸಿದಂತೆ ತಂದೆ ತಾಯಿಗಳು ಎದೆಗುಂದಿದವರಾಗಿ ದುಃಖಿತರಾದರು. ಅದೇ ಕಾಲದಲ್ಲಿ ದೇವ ಮಹರ್ಷಿಯಾದ ನಾರದರು ಮಾರ್ಕಂಡೇಯನಿಗೆ ಮೃತ್ಯುಂಜಯ ಮಂತ್ರವನ್ನು ಬೋಧಿಸಿ, ಶಿವನನ್ನು ಕುರಿತು ತಪಸ್ಸನ್ನಾಚರಿಸಲು ಹೇಳಿದರು. ಕೇವಲ ತನ್ನ ಮಾತಾ ಪಿತೃಗಳ ಆನಂದವನ್ನೇ ಗುರಿಯನ್ನಾಗಿಟ್ಟುಕೊಂಡ ಮಾರ್ಕಂಡೇಯನು ಏಕಚಿತ್ತದಿಂದ ನಾರದರ ಉಪದೇಶದಂತೆ ಶಿವಲಿಂಗದೆದುರಿಗೆ ಮಂತ್ರವನ್ನು ಪಠಿಸುತ್ತ ಕುಳಿತನು. ನಿರ್ದಿಷ್ಟವಾದ ವೇಳೆಗೆ ಈ ಮಾರ್ಕಂಡೇಯನ ಪ್ರಾಣಹರಣಕ್ಕಾಗಿ ಸಾಕ್ಷಾತ್ ಯಮಧರ್ಮನೇ ಅವನಿದ್ದಲ್ಲಿಗೆ ಬಂದನು. ಕೂಡಲೇ ಮಾರ್ಕಂಡೇಯನು ರಕ್ಷಣೆಗಾಗಿ ಶಿವಲಿಂಗವನ್ನು ಬಿಗಿದಪ್ಪಿಕೊಂಡನು. ಆದರೆ ಯಮನು ಶಿವಲಿಂಗದೊಡನೆಯೇ ಮಾರ್ಕಂಡೇಯನನ್ನು ಎಳೆಯಲು ಪ್ರಯತ್ನಿಸಿದನು, ಈ ವೇಳೆಗೆ ಶಿವನು ನಿಜರೂಪದಲ್ಲಿ ಪ್ರತ್ಯಕ್ಷನಾಗಲು ಶಿವ ಮತ್ತು ಯಮ ಇವರ ನಡುವೆ ಚರ್ಚೆ ಆರಂಭವಾಯಿತು. ಮಾರ್ಕಂಡೇಯನ ಆಯುಸ್ಸು ಮುಗಿದದ್ದರಿಂದ ತನ್ನ ಕರ್ತವ್ಯ ಪರಿಪಾಲನ ದೃಷ್ಟಿಯಿಂದ ಯಮನು ಅವನ ಜೀವವನ್ನು ತೆಗೆದುಕೊಂಡು ಹೋಗಲೇಬೇಕಾಗಿತ್ತು. ಆಗ ಶಿವನು ತನ್ನ ಆಯುಷ್ಯದ ಅರ್ಧಭಾಗವನ್ನು ಮಾರ್ಕಂಡೇಯನಿಗೆ ವರ್ಗಾಯಿಸಿದನು, ಶಿವನ ಜೀವನಾ

ವಧಿಯು ಅಗಣಿತವಾದುದು, ಆದ್ದರಿಂದ ಅದರ ಅರ್ಧ ಭಾಗವೂ ಸಹ ಅಗಣಿತವಾದುದು. ಹೀಗಾಗಿ ಮಾರ್ಕಂಡೇಯನು ಚಿರಂಜೀವಿ ಪದವಿಯನ್ನು ಪಡೆದನು.

ಯಮನು ಸೋತ ಇನ್ನೊಂದು ಪ್ರಸಂಗವೆಂದರೆ, ಸಾವಿತ್ರಿಯ ಪ್ರಸಂಗ. ಸ್ತ್ರೀ ಶಕ್ತಿಯ ವಿರುದ್ಧವಾಗಿ ತಾನು ಶ್ರಮಿಸುತ್ತಿದ್ದೇನೆ ಎಂಬುದರ ಅರಿವೇ ಇಲ್ಲದೆ ಯಮನು ಮತ್ತೆ ಮತ್ತೆ ಎಡವಿದನು. ಹೀಗಾಗಿ ಸಾವಿತ್ರಿಗೆ ತನಗೆ ಬೇಕಾದ ವರ, ಅಂದರೆ ತನ್ನ ಗಂಡನು ಪೂರ್ಣಾವಧಿಯವರೆಗೆ ಬಾಳಬೇಕೆಂಬುದನ್ನು ಪಡೆಯುವುದು ಒಂದು ಸಮಸ್ಯೆಯಾಗಿ ಉಳಿಯಲೇ ಇಲ್ಲ. ಅಂದರೆ ಅದಕ್ಕೂ ಪೂರ್ವದಲ್ಲಿ ಅವಳು ಯಮನಿಂದ ಅನೇಕ ವರಗಳನ್ನು ಪಡೆದಳು.

ಇನ್ನೊಂದು ಪ್ರಸಂಗದಲ್ಲಿ ಮಗನ ಮೇಲಿನ ಅತಿ ಮೋಹದಿಂದ ಚಿರಂಜೀವತ್ವವು ಹೇರಲ್ಪಟ್ಟಿತು. ತಮ್ಮ ಮಗ ಅಶ್ವತ್ಥಾಮನ ಮೇಲೆ ಅತಿ ವ್ಯಾಮೋಹಗೊಂಡಿದ್ದ ದ್ರೋಣಾಚಾರ್ಯರು ಆತ ಮರಣಾಧೀನನು ಎಂಬ ಸತ್ಯವನ್ನು ಒಪ್ಪುವ ಸ್ಥಿತಿಯಲ್ಲಿ ಇರಲಿಲ್ಲ. ತಮ್ಮ ತಪಸಿದ್ಧಿಯ ಮಹಾಶಕ್ತಿಯಿಂದ ದ್ರೋಣಾಚಾರ್ಯರು ತಮ್ಮ ಮಗನನ್ನು ಚಿರಂಜೀವಿಯಾಗೆಂದು ಹರಸಿದರು. ಇವರಲ್ಲದೆ ಯತಿಪುಂಗವರಾದ ವ್ಯಾಸರು ಹಾಗೂ ವಿಷ್ಣುವಿನ ಅವತಾರಿಯಾದ ಪರಶುರಾಮನು ಚಿರಂಜೀವಿಗಳಾದ ಇನ್ನಿಬ್ಬರು.

ಚಿರಂಜೀವಿಗಳಲ್ಲಿ ಸರ್ವ ಶ್ರೇಷ್ಠನಾದವನೆಂದರೆ ಹನುಮಂತನೆಂದು ಎಲ್ಲರ ಅಭಿಪ್ರಾಯ ಅವನ ಪ್ರಸಂಗದಲ್ಲಿ ಅಮರತ್ವವು ಆಶಿಸಲ್ಪಡದಿದ್ದರೂ, ಅದು ಅವನಲ್ಲಿ ಅರ್ಥಪೂರ್ಣವಾಗಿದೆ. ಜೀವನದಲ್ಲಿ ಅವನಿಗೆ ಇಷ್ಟವಾದುದೆಂದರೆ ಎರಡು ವಿಷಯಗಳು – ಒಂದು: ರಾಮನಾಮ, ಇನ್ನೊಂದು: ಸಂಕಟದಲ್ಲಿರುವವರಿಗೆ ಸಹಾಯ ಮಾಡುವುದು. ರಾಮನಾಮ ಇರುವವರೆಗೂ ಹನುಮಂತನು ಅಮರನೇ. ಈ ದೃಷ್ಟಿಯಿಂದ ವಿಚಾರಮಾಡಿದಾಗ ಅವನ ಅಮರತ್ವಕ್ಕೆ ವಿಶೇಷಾರ್ಥವಿದೆ. ತನ್ನ ಅತ್ಯದ್ಭುತವಾದ ಶಕ್ತಿಯನ್ನೊಳಗೊಂಡು ಜೀವನದಲ್ಲಿ ಸರ್ವಸ್ವಕ್ಕೂ ಅವನು ಅಚಿಂತ್ಯನು. ಯಾವುದೇ ಕೆಲಸಮಾಡುವಲ್ಲಿ ಅತನಿಗಿದ್ದ ಶಕ್ತಿಯ ಬಗ್ಗೆ ಇನ್ನೊಬ್ಬರು ಹೇಳಿಕೊಡದ ಹೊರತು ಅವನಿಗೆ ಅದರ ಪರಿವೆಯೇ ಇರಬಾರದೆಂದು ಶಾಪವಿತ್ತೇನೋ! ಆದ್ದರಿಂದ ಹನುಮಂತನನ್ನು ಕುರಿತು ನಮ್ಮ ಇಚ್ಛೆಯನ್ನು ಪೂರ್ಣಗೊಳಿಸಲು ಅಥವಾ ಯಾವುದೇ ಅನರ್ಥವನ್ನು ದೂರೀಕರಿಸಲು ಪ್ರಾರ್ಥಿಸುವಾಗ ಅದನ್ನು ಈಡೇರಿಸಲು ಶಕ್ತಿ–ಸಾಮರ್ಥ್ಯ ಅವನಲ್ಲಿದೆ ಎಂಬುದನ್ನು ನೆನಪು ಮಾಡಿಕೊಳ್ಳಬಹುದು.

———

( 4ನೇ ಪುಟದಿಂದ )

ಅಂದು ಮಧ್ಯಾಹ್ನ ಖಗವರಧ್ವಜ ವಿಠಲ ದಾಸರ 'ಮೋಹನದಾಸರ ಪರಂಪರೆ' ಹಾಗೂ ಕೆ. ವೆಂಕಟರಾಯಾಚಾರ್ಯರ 'ಹರಿದಾಸ ಪ್ರಬೋಧಿತತತ್ತ್ವ' ಉಪನ್ಯಾಸಗಳು ನಡೆದವು. ಸಂಜೆ ಬಿ. ಎಸ್. ಕೆ. ಶರ್ಮರ 'ಮಧ್ವರ ದ್ವೈತ ವೇದಾಂತ' ವಿವರಣೆ ನಡೆದ ಮೇಲೆ ತಿರುಪತಿಯ ಭಟ್ಟಾಚಾರ್ಯ ಸಹೋದರರು 'ವ್ಯಾಸರಾಯಲು' ಬುರ್ರಕಥೆಯನ್ನು ಮಾಡಿ ಜನಮನ ರಂಜಿಸಿದರು

24–1–82 ರ ಬೆಳಗ್ಗೆ ಡಾ|| ಕೆ. ವೆಂಕಟೇಶಾಚಾರ್ಯರು ಭಾರತತಾತ್ಪರ್ಯ ನಿರ್ಣಯವನ್ನು ಕುರಿತು ಮಾತನಾಡಿದರು. ಅಂದನಿಂದ 26–1–82 ವರೆಗೆ ಪ್ರತಿದಿನವೂ ಬೆಳಗ್ಗೆ ಒಂದು ಗಂಟೆಯಕಾಲ ಅವರ ಭಾರತತಾತ್ಪರ್ಯ ನಿರ್ಣಯವನ್ನು ಕೇಳಲು ಜನ ಕುತೂಹಲದಿಂದ ಆಗಮಿಸುತ್ತಿದ್ದುದು ಸಾಮಾನ್ಯ ದೃಶ್ಯವಾಗಿದ್ದಿತು

ಅಂದು ಸಂಜೆ ಪುರಂದರದಾಸರ ಪಟದ ಮೆರವಣಿಗೆ. ಸಹಸ್ರಾರು ಜನ ಭಾಗವತ ಸಂದೋಹದೊಂದಿಗೆ ದಾಸರ ಪದಗಳನ್ನು ಹಾಡುತ್ತ ನರ್ತಿಸುತ್ತ ನಡೆದ ಸೊಬಗು ಇತರ ಮೆರವಣಿಗೆಗಳಿಗಿಂತ ಬೇರೆಯಾಗಿ ಕೋಲು ಹಾಡು ಭಜಗಳಿಂದಾದ ವೈಶಿಷ್ಟ್ಯವನ್ನು ಹೊಂದಿ ವಿಶೇಷ ಚಿತ್ತಾಕರ್ಷಕವಾಗಿದ್ದಿತು.

ಅಂದು ರಾತ್ರಿ ಪುರಂದರ ದಾಸರ ಆರಾಧನೆಯ ಅಂಗವಾಗಿ ಪುರಂದರ ಸಂಸ್ಮರಣೆ ಸಭೆ ನಡೆಯಿತು. ಸರ್ವಶ್ರೀ ಬಿ. ಎಸ್. ಕೆ. ಶರ್ಮ, ಕೆ. ಅಪ್ಪಣ್ಣಾಚಾರ್ಯ, ನಿಜಗಲ್ ನರಸಿಂಹಚಾರ್ಯ, ಡಾ|| ವಾಸುದೇವರಾಯರುಗಳು ಪುರಂದರದಾಸರ ಜೀವನ ಕೀರ್ತನೆಗಳನ್ನೂ ಅವರ ಸಾಮಾಜಿಕ, ಆಧ್ಯಾತ್ಮಿಕ ಕಾಳಜಿಗಳನ್ನೂ ಕುರಿತು ಮಾತನಾಡಿದರು.

ಮೈಸೂರಿನ ಸತ್ಯಪ್ರಮೋದ ಕೃಪಾಪೋಷಿತ ಮಹಿಳಾಮಂಡಳಿಯ ಬಾಲಿಕೆಯರಿಂದ ಕೋಲಾಟ ನೃತ್ಯ ಅಂದಿನ ರಾತ್ರಿ ಹೃನ್ಮನ ಮುದಾವಹವಾಗಿದ್ದಿತು.

25–1–82 ರ ಬೆಳಗ್ಗೆ ಹಿಂದಿನ ದಿನಗಳ ಉಪನ್ಯಾಸಗಳು ಮುಂದುವರೆದವು. ಅಂದು ಸಂಜೆ ನಿಜಗಲ್ ನರಸಿಂಹಾಚಾರ್ಯರು 'ಪುರಂದರರಕೀರ್ತನೆಗಳಲ್ಲಿ ಉಪನಿಷತ್ ಸಾರ' ವನ್ನು ಕುರಿತೂ, ಕೆ. ಅಪ್ಪಣ್ಣಾಚಾರ್ಯರು ಹರಿದಾಸ ಸಾಹಿತ್ಯದಲ್ಲಿ ಪ್ರಕಟವಾಗಿರುವ ರಾಘವೇಂದ್ರರನ್ನು ಕುರಿತೂ ಮಾತನಾಡಿದರು. ನಂತರ ಮಹಿಳೆಯರಿಂದ ಭಜನೆ, ಗಾಯನಗಳು ನಡೆದವು.

26–1–82 ರ ಬೆಳಗ್ಗೆ ಹಿಂದಿನ ದಿನಗಳ ಉಪನ್ಯಾಸಗಳು ಮುಗಿತಾಯಗೊಂಡವು. ಅಂದು ಸಂಜೆ ಶ್ರೀ ಗುರು ಗೋವಿಂದ ವಿಠಲದಾಸರಿಂದ ಪಂಡಿತಸನ್ಮಾನ ನಡೆಯಿತು. ಸನ್ಮಾನಿತ ಪಂಡಿತರೆಂದರೆ ಸರ್ವಶ್ರೀ ಬಿ. ಎಸ್. ಕೆ ಶರ್ಮ, ನಿಜಗಲ್ ನರಸಿಂಹಾಚಾರ್ಯ, ಕೆ. ವೆಂಕಟೇಶಾಚಾರ್ಯ. ನಂತರ ಶ್ರೀ ಗುರುಗೋವಿಂದ ವಿಠಲ ದಾಸರಿಂದ ಅನುಗ್ರಹ ಸಂದೇಶವಾಗಿ ಸಮ್ಮೇಳನ ಪೂರ್ಣಗೊಂಡಿತು.

ರಾತ್ರಿ ಬಹುಹೊತ್ತಿನವರೆಗೆ ಸರತಿಯಸಾಲಿನಲ್ಲಿ ವಸ್ತು ಪ್ರದರ್ಶನವನ್ನು ವೀಕ್ಷಿಸಲು ಬರುತ್ತಿದ್ದ ಆಸ್ತಿಕ ಜನವೆಲ್ಲ ತಿರುಪತಿಯ ದಾಸಸಾಹಿತ್ಯ ಪ್ರಾಜೆಕ್ಟ್ ಅನ್ನು ಅದರ ಸಾಧನೆಗಳಿಗಾಗಿ ಶ್ಲಾಘಿಸುತ್ತಿದ್ದದ್ದು ಸಾಮಾನ್ಯ ದೃಶ್ಯವಾಗಿದ್ದಿತು.

## ವೇದ ಶಾಸ್ತ್ರಾಗಮ ವಿದ್ವತ್ ಸದಸ್ ಪರೀಕ್ಷೆಗಳು

ತಿ. ತಿ. ದೇ. ಗಳು ನಡೆಸಿಕೊಂಡು ಬರುತ್ತಿರುವ ವೇದ ಶಾಸ್ತ್ರಾಗಮ ವಿದ್ವತ್ ಸದಸ್‌ನ 1981–82 ನೇ ಸಾಲಿನ ಪರೀಕ್ಷೆಗಳು ಶ್ರೀನಿವಾಸಮಂಗಾಪುರದ ತಿ. ತಿ. ದೇ. ಕಲ್ಯಾಣ ಮಂಟಪದಲ್ಲಿ 12–3–82 ರಿಂದ 16–3–82 ರವರೆಗೆ ನಡೆದು 17–3–82 ರಂದು ಸಮಾರೋಪಗೊಳ್ಳುವುದೆಂದು ವರದಿಗಳು ತಿಳಿಸುತ್ತವೆ. ಈ ಪರೀಕ್ಷೆಗಳು ನರಸಿಂಗಾಪುರದ ಎಸ್. ವಿ. ವೇದಪಾಠಶಾಲೆಯ ಪ್ರಿನ್ಸಿಪಾಲ್ ಶ್ರೀ ಡಿ. ರಾಮಚಂದ್ರ ಶಾಸ್ತ್ರಿಯವರ ಕಾರ್ಯದರ್ಶಿತ್ವದಲ್ಲಿ ನಡೆಯುತ್ತವೆ. ಸದಸ್ ಪರೀಕ್ಷೆಗಳಲ್ಲಿ ಭಾಗವಹಿಸುವ ಪರೀಕ್ಷಕರಿಗೂ ಪರೀಕ್ಷಾರ್ಥಿಗಳಿಗೂ ತಿರುಪತಿಯ ಮೊದಲನೆಯ ಸತ್ರದಲ್ಲಿ ವಸತಿ ಸೌಕರ್ಯವನ್ನೇರ್ಪಡಿಸಲಾಗಿದೆ.


*Statement about ownership and other particulars about*

**SAPTHAGIRI**
**(MONTHLY)**

FORM IV
( *See Rule* 8)

| | | | |
|---|---|---|---|
| 1 | Place of publication | ... | TIRUPATI. |
| 2 | Periodicity of its publication | ... | Monthly |
| 3 | Honorary Editor | ... | Sri P. V. R. K. PRASAD, I.A.S. Executive officer, T.T.D. |
| 4 | Printer's Name | ... | Sri M. Vijayakumar Reddy, L.P.T., |
| | (Whether citizen of India ) | ... | Yes |
| | Address | ... | Manager, T.T.D. Printing Press, Tirupati. |
| 5 | Editor & Publisher's Name | ... | K. Subba Rao, M.A., |
| | (Whether citizen of India ) | ... | Yes |
| | Address | | Editor, Sapthagiri T.T.D. Journal, Tirupati. |
| 6 | Names and addresses of individuals who own the newspaper and partners or shareholders holding more than one percent of the total capital. | ... ... | Board of Trustees represented by the Executive Officer on behalf of T. T. D., Tirupati. |

*I, K. Subba Rao, hereby declare that the particulars given above are true to the best of my knowledge and belief.*

TIRUPATI,
*Date*: 26-2-1982.

**(*Sd.*) K. SUBBA RAO,**
*Signature of the Publisher.*

## "ತಿರುಪತಿ ತಿಮ್ಮಪ್ಪ" ಕೃತಿಗೆ ಸಾಹಿತ್ಯ ಅಕ್ಯಾಡಮಿ ಬಹುಮಾನ

ಪ್ರೊ॥ ಎಸ್. ಕೆ. ರಾಮಚಂದ್ರರಾಯರು ಬರೆದ "ತಿರುಪತಿ ತಿಮ್ಮಪ್ಪ" ಕೃತಿಗೆ ಕರ್ನಾಟಕ ಸಾಹಿತ್ಯ ಅಕ್ಯಾಡಮಿಯ ಸೃಜನೇತರ ಕೃತಿ ಪ್ರಶಸ್ತಿ ದೊರೆತಿದೆ. ಮೂರುಸಾವಿರ ರೂಗಳ ನಗದು ಹಾಗೂ ಪ್ರಶಸ್ತಿ ಪತ್ರವನ್ನು ಹೊಂದಿದ ಈ ಬಹುಮಾನ ಪ್ರೊ॥ ಎಸ್. ಕೆ. ರಾಮಚಂದ್ರರಾಯರ ಐತಿಹಾಸಿಕ ಸಾಂಸ್ಕೃತಿಕ ವಿಮರ್ಶನ ಪ್ರತಿಭೆಗೆ ಸಂದ ಗೌರವ ಎಂದು ತಿಳಿಯಲಾಗಿದೆ. ಇದೇ ಸಾಲಿನಲ್ಲಿ ಡಾ॥ ಟಿ. ಎನ್. ನಾಗರತ್ನ ಅವರ ಸಂಪಾದಿತ 'ವಾದಿರಾಜರ ಕೃತಿಗಳು' ಪುಸ್ತಕಕ್ಕೆ ಸಾವಿರದ ಐದನೂರು ರೂಗಳ ನಗದು ಹಾಗೂ ಪ್ರಶಸ್ತಿ ಪತ್ರದ ಬಹುಮಾನ ದೊರೆತಿರುವುದು. (ಡಾ ॥ಟಿ. ಎನ್. ನಾಗರತ್ನ ಅವರ ಲೇಖನವನ್ನು ಒಳಗಿನ ಪುಟಗಳಲ್ಲಿ ಕಾಣಬಹುದು)




### ಕರ್ನಾಟಕದಲ್ಲಿ ಬ್ರಹ್ಮ ಚೈತನ್ಯ ಆರಾಧನೆ

ತಗ್ಗಿಹಳ್ಳಿ (ತುಮಕೂರು ಜಿಲ್ಲೆ) ರಾಮಕೃಷ್ಣಾಶ್ರಮದಲ್ಲಿ ಈಚೆಗೆ ಶ್ರೀ ಬ್ರಹ್ಮಚೈತನ್ಯರ ಆರಾಧನೆ ನಡೆಯಿತು. ಆರಾಧನೆಯ ಅಂಗವಾಗಿ ಶ್ರೀ ಗಣಪತಿ ಮಹಾಯಾಗ, ರಾಮ ತಾರಕ ಹೋಮಗಳು ನಡೆದವು. ಹಾಸನದ ಸಂತ ಶ್ರೀ ಹರಿದಾಸ ಬ್ರಹ್ಮಚಾರಿಯವರು, ಚಿತ್ರದುರ್ಗದ ಶ್ರೀ ಶಾಂತಾನಂದಸ್ವಾಮಿಗಳು ಚಿಕ್ಕ ಬಳ್ಳಾಪುರದ ಶ್ರೀ ವಿರಜಾನಂದ ಸ್ವಾಮಿಗಳು ಧಾರ್ಮಿಕ ಪ್ರವಚನಗಳನ್ನು ಮಾಡಿದರು.

ತಿ. ತಿ. ದೇ. ಹಿಂದೂ ಧರ್ಮ ರಕ್ಷಣಸಂಸ್ಥೆಯ ಗೌರವ ಪ್ರತಿನಿಧಿ ಗೋಕರೆ ಸುಬ್ಬರಾಮಯ್ಯನವರು ಮಾತನಾಡುತ್ತ ಹೈಂದವ ಧರ್ಮದ ಹಿರಿಮೆ, ವೈಶಾಲ್ಯ, ವೈಜ್ಞಾನಿಕತೆಗಳನ್ನು ವಿವರಿಸಿ ಅವುಗಳನ್ನು ಕಾಪಾಡಿ ಕೊಳ್ಳುವ ಹೊಣೆ ಪ್ರತಿ ಹಿಂದೂವಿಗೂ ಸೇರಿದ್ದು ಎಂದರು. ಪುಸ್ತಕ ವಿತರಣೆಯನ್ನೂ ಮಾಡಿದರು.

### ಹಿಂದೂ ಸಾಮಾಜ ದಿನ

ಕೋಲಾರ ಜಿಲ್ಲೆಯ ಸ್ವರ್ಣಪುರಿ ನಗರದಲ್ಲಿ ಭಾರತೀಯ ಗಣತಂತ್ರ ದಿನಾಚರಣೆಯಂದು ಅಲ್ಲಿನ ವಿಶ್ವ ಹಿಂದೂ ಪರಿಷತ್ ಶಾಖೆಯವರು ಹಿಂದೂ ಸಾಮಾಜ ದಿನವನ್ನು ಆಚರಿಸಿದರು. ಸರಳತೆ, ಸಡಗರ, ಉತ್ಸಾಹಗಳಿಂದ ಕೂಡಿದ ಮೆರವಣಿಗೆಯಲ್ಲಿ ಭಾರತಮಾತೆ, ಗೀತೋಪದೇಶಗಳ ಟ್ಯಾಬ್ಲೋಗಳು ಅತಿ ಸುಂದರವಾಗಿ ಪರಿಣಾಮಕಾರಿಯಾಗಿದ್ದವು. ಓಂಕಾರದ ಟ್ಯಾಬ್ಲಾಯ್ಡ್ ಅತಿ ದೂರಕ್ಕೂ ಕಾಣುವಂತೆ ಉತ್ತುಂಗವೂ, ಆಕರ್ಷಕವೂ ಆಗಿದ್ದಿತು.

ಮೆರವಣಿಗೆಯ ಮಧ್ಯದಲ್ಲಿ ಗುರುತುಲ್ಯರಾಗಿ ಬೇಲಿ ಮಠದ ಶ್ರೀಪಾದಂಗಳವರೂ, ದಲಿತ ಕ್ರಿಯಾಸಮಿತಿಯ ನೇತಾರ ಶ್ರೀ ಕನಕರಾಜನ್ ಅವರುಗಳೂ ನಿದಾನವಾಗಿ ನಡೆಯುತ್ತ ಬರುವಲ್ಲಿ ಗಣಿಪ್ರದೇಶದ ರಸ್ತೆಗಳ ಇಕ್ಕೆಲದ ಜನಸ್ತೋಮ ಮೆರವಣಿಗೆಯಲ್ಲಿ ಕೂಡಿಕೊಂಡು 'ವಂದೇಮಾತರಂ', 'ಹಿಂದು ಬಂಧು' ಘೋಷಣೆ ಹಾಕುತ್ತ ನಡೆಯಿತು.

ಮೆರವಣಿಗೆಯ ನಂತರ ಕಿಂಗ್ ಜಾರ್ಜ್ ಹಾಲ್‌ನ ಹೊರ ಆವರಣದಲ್ಲಿ ನಡೆದ ಬಹಿರಂಗ ಸಭೆಯಲ್ಲಿ ಬೇಲಿ ಮಠದ ಶ್ರೀಪಾದಂಗಳು ಮಾತನಾಡುತ್ತ ಹಿಂದೂ ಸಮಾಜದಲ್ಲಿನ ಅಜ್ಞಾನ ಅನಕ್ಷರತೆ, ಅಸ್ಪೃಶ್ಯತೆಗಳನ್ನು ತೊಡೆದು ಹಾಕಿ ಸಾಮಾಜಿಕ ಧಾರ್ಮಿಕ ನೈತಿಕ ಉನ್ನತಿಗಾಗಿ ಶ್ರಮಿಸಬೇಕಾದ ಅಗತ್ಯ ಎಂದಿಗಿಂತಲೂ ಇಂದು ಹೆಚ್ಚಾಗಿದೆ ಎಂದೂ ಹಿಂದೂ ತರುಣರು ಈ ದಿಸೆಯಲ್ಲಿ ಕೆಲಸಮಾಡಬೇಕೆಂದೂ ಕರೆನೀಡಿದರು.

ಶ್ರೀ ಕನಕರಾಜನ್ ಅವರು ಮಾತನಾಡುತ್ತ ವಿಭಿನ್ನತೆಯನ್ನು ಮರೆತು ರಾಷ್ಟ್ರೀಯ ಅಭಿವೃದ್ಧಿಯತ್ತ ಹಿಂದೂ ಸಮಾಜವು ಮುಂದು ವರೆಯಬೇಕೆಂದೂ ಅದಕ್ಕಾಗಿ ಸುಸಂಘಟಿತರಾಗುವ ಅಗತ್ಯವಿದೆ ಎಂದು ತಿಳಿಸಿದರು.

ಸ್ವರ್ಣಪುರಿಯ ವಿಶ್ವ ಹಿಂದೂ ಪರಿಷತ್‌ನ ತರುಣ ಸದಸ್ಯರುಗಳು ಮಾತನಾಡಿ ಏಕತೆಯತ್ತ ಹಿಂದೂ ಜನಾಂಗ ಮುಂದುವರೆಯುವ ತಮ್ಮ ಒಮ್ಮುಖದ ಅಭಿಪ್ರಾಯವನ್ನು ವ್ಯಕ್ತಪಡಿಸಿದರು.

ಮುಂದಿನ ಸಂಚಿಕೆಯಲ್ಲಿ;

**ಸಪ್ತಗಿರಿ — ಏಪ್ರಿಲ್ 1982**

**ಶ್ರೀರಾಮನವಮಿ ವಿಶೇಷ ಸಂಚಿಕೆ**

**ಆಧ್ಯಾತ್ಮ ರಾಮಾಯಣ** — ಡಾ ॥ ಅನಂತರಂಗಾಚಾರ್

**ಶ್ರೀ ಕೋದಂಡರಾಮಸ್ವಾಮಿ ದೇವಾಲಯ** — ಡಾ ॥ ಕೆ. ಸರ್ವೋತ್ತಮನ್

**ಸಪ್ತರ್ಷಿ ರಾಮಾಯಣ** — ಗುರುರಾಜಚಾರ್ಯ

**ರಾಘವೇಂದ್ರರ ರಾಮಚರಿತೆ** — ಟಿ. ಎಸ್. ಪದ್ಮನಾಭರಾವ್

**ಶ್ರೀ ಕೋದಂಡರಾಮಸ್ವಾಮಿ ಸುಪ್ರಭಾತ** — ಡಾ ॥ ಎಸ್. ಬಿ. ರಘುನಾಥಾಚಾರ್ಯ

**ಕುವೆಂಪು ಚಿತ್ರಿಸಿದ ಬಾಲಕ ಶ್ರೀರಾಮಚಂದ್ರ** — ಮು. ಕೃಷ್ಣಪ್ಪ

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.**

ಬೆಲೆ: ರೂ. 1–00 ಮಾತ್ರ

Edited and Published on behalf of the T. T. Devastanams by K. Subba Rao, M. A., and Printed at T. T. D. Press by M. Vijayakumar Reddy, Manager, T. T. D. Press, Tirupati - 517 501·

# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ.

## ವಿವಿಧ ಆರ್ಜಿತ ಉತ್ಸವಗಳ ದರ ವಿವರಣೆ

ವಿಶೇಷ ಪ್ರವೇಶ ರೂ 25–00
(ಸರ್ವದರ್ಶನ ಸಮಯದಲ್ಲಿ ಮಹಾದ್ವಾರದ ಬಳಿಯಲ್ಲಿ ಸರತಿಯಸಾಲಿನಲ್ಲಿ ಸೇರುವಿಕೆ)

### ಸೇವೆಗಳು

| | | |
|---|---|---|
| 1. | ಆಮಂತ್ರಣೋತ್ಸವ[1] | ರೂ 400 |
| 2. | ಅಭಿಷೇಕ* | ರೂ 500 |
| 3. | ಗಂಬುರ* | ರೂ 300 |
| 4. | ಪುನುಗು* | ರೂ 200 |
| 5. | ಜಾಫ್ರಾ* | ರೂ 100 |
| 6. | ಕಸ್ತೂರಿ* | ರೂ 100 |
| 7. | ಸಹಸ್ರಕಲಶಾಭಿಷೇಕ | ರೂ 3000 |
| 8. | ತಿರುಪ್ಪಾವಡಾ[2] | ರೂ 6000 |
| 9. | ಕೋಯಿಲ್ ಆಳ್ವಾರ್ ತಿರುಮಂಜನ | ರೂ 3000 |
| 10. | ಮುಕುರ ಮಂಟಪದಲ್ಲಿ ಡೋಲೋತ್ಸವ[2] | ರೂ 1500 |
| 11. | ಸಹಸ್ರದೀಪಾಲಂಕಾರ ಸೇವೆ | ರೂ 2000 |

### ಉತ್ಸವಗಳು

| | |
|---|---|
| ವಸಂತೋತ್ಸವ | ರೂ 3000 |
| ಕಲ್ಯಾಣೋತ್ಸವ | ರೂ 2000 |
| ಬ್ರಹ್ಮೋತ್ಸವ | ರೂ 750 |
| ತೆಪ್ಪೋತ್ಸವ[2] | ರೂ 2500 |
| ಪವಿತ್ರೋತ್ಸವ | ರೂ 2500 |

### ವಾಹನಗಳು

| | |
|---|---|
| ಬಂಗಾರದ ಗರುಡ, ಕಲ್ಪವೃಕ್ಷ, ಸೂರ್ಯಪ್ರಭ, ಸರ್ವಭೂಪಾಲ, ಪ್ರತಿ ಒಂದಕ್ಕೆ | ರೂ 125 |
| ಬೆಳ್ಳಿಯ ಗರುಡ, ಚಿಕ್ಕಶೇಷ, ಚಂದ್ರಪ್ರಭ, ಗಜ, ತುರಗ, ಹಂಸ, ಹನುಮಂತ ಪ್ರತಿ ಒಂದಕ್ಕೆ | ರೂ 100 |

1. ಆಮಂತ್ರಣೋತ್ಸವಕ್ಕೆ ಇಬ್ಬರಿಗೆ ಮಾತ್ರ ಪ್ರವೇಶ.

* 2,3,4,5,6, ಸೇವೆಗಳಿಗೆ ಒಬ್ಬರಿಗೆ ಮಾತ್ರ ಪ್ರವೇಶ.

2. ಈ ಸೇವೆಗಳಲ್ಲಿ ಐದು ಗ್ರಾಂನ ಚಿನ್ನದ ಪದಕವನ್ನು ಬಹೂಕರಿಸಲಾಗುವುದು.

ವಿವರಗಳಿಗೆ: **ಪೇಷ್ಕಾರ್, ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ** ಇವರಿಗೆ ಬರೆಯಿರಿ ಅಥವಾ **ತಿರುಮಲೆಯ ವಿಜಯಾ ಬ್ಯಾಂಕಿನಲ್ಲಿ** ವಿಚಾರಿಸಿ

# ತಿರುಮಲೆ ತಿರುಪತಿಗಳಲ್ಲಿ ವಸತಿ ಸೌಲಭ್ಯ

## ತಿರುಮಲೆ

| | | |
|---|---|---|
| ವಿಶೇಷ ರೀತಿಯ ಕಾಟೇಜುಗಳು | ದಿನವೊಂದಕ್ಕೆ | ರೂ75–00 |
| ಟಿ.ಬಿ ಸಿ ಒಳಗಿ ಕಾಟೇಜುಗಳು | ” | ರೂ 50–00 |
| ಎಸ್. ವಿ. ಅತಿಥಿಗೃಹ ತಿರುಮಲೆ | | |
| ಅ) ದೊಡ್ಡ ಕೋಣೆಗಳು | ,, | ರೂ 50–00 |
| ಆ) ಮೂಲೆಯ ಕೋಣೆಗಳು | ,, | ರೂ 40–00 |
| ಇ) ಕಿರಿಯ ಕೋಣೆಗಳು | ,, | ರೂ 35–00 |
| ಎಚ್. ಆರ್. ಜಿ. ಕಾಟೇಜು | ,, | ರೂ 150–00 |
| ಮದುವೆಯ ಹಾಲ್‌ಗಳು | | |
| ರೂಯಾ ಕಾಟೇಜು | ,, | ರೂ 80–00 |
| ಗೋಗಿನೇನಿ ಕಾಟೇಜು | ,, | ರೂ 80–00 |
| ಸಿ ಸಿ. ಕಾಟೇಜು | ,, | ರೂ 100–00 |
| ಎಸ್.ಎಂ.ಸಿ. ಪೂರ್ವ ನಂ. 9 | ,, | ರೂ 50–00 |
| ಎ.ಟಿ.ಸಿ. ನಂ. 39 | ,, | ರೂ 80–00 |
| ಶಂಖುಮಿಟ್ಟ ಕಾಟೇಜುಗಳು (ಪೂರ್ತಿ) | | ರೂ 20–00 |
| ಶೇಷಾದ್ರಿನಗರ ,, | ,, | ರೂ 20–00 |
| ಅಂಜನಾದ್ರಿನಗರ ,, | ,, | ರೂ 20–00 |
| ಗರುಡಾದ್ರಿನಗರ ,, | ,, | ರೂ 20–00 |

ವಿವರಗಳಿಗೆ: ರಿಸೆಪ್ಷನ್ ಆಫೀಸರ್, ಟಿ ಟಿ.ಡಿ. ತಿರುಮಲೆ

## ತಿರುಪತಿ

| | | |
|---|---|---|
| ಶ್ರೀನಿವಾಸ ಸತ್ರ ಎರಡು ಹಾಸಿಗೆಗಳಕೋಣೆ | | ರೂ 12–00 |
| ನಾಲ್ಕು | ” | ರೂ 15–00 |
| ಒಂದು | ” | ರೂ 10–00 |
| ಶ್ರೀ ಪದ್ಮಾವತಿ ಅತಿಥಿಗೃಹ | | |
| ಹವಾನಿಯಂತ್ರಿತ 2 ಹಾಸಿಗೆಗಳ ಕೋಣೆ | | ರೂ 40–00 |
| ,, ಒಂದು ಹಾಸಿಗೆಯ ಕೋಣೆ | | ರೂ 30–00 |
| ಶ್ರೀ ವೆಂಕಟೇಶ್ವರ ಅತಿಥಿಗೃಹ | | |
| ಎರಡು ಹಾಸಿಗೆಗಳ ಕೋಣೆ | | ರೂ 16–00 |

ವಿವರಗಳಿಗೆ : ರಿಸೆಪ್ಷನ್ ಆಫೀಸರ್, ಟಿ.ಟಿ.ಡಿ. ತಿರುಪತಿ.

ತಿರುಮಲೆ–ತಿರುಪತಿಗಳಲ್ಲಿನ ವಸತಿಯನ್ನು ಕಾಯ್ದಿರಿಸಬಹುದು. ಆಯಾ ವಸತಿಸೌಕರ್ಯಕ್ಕೆ ಅನುಗುಣವಾದ ಹಣದ ಡಿ. ಡಿ. ಯನ್ನು ಕಳುಹಿಸುವಾಗ ಅಂಚೆ ವಿಳಾಸ ಹಾಗೂ ಅಪೇಕ್ಷಿತ ವಸತಿ ಸೌಕರ್ಯದ ವಿವರಗಳನ್ನು ಸ್ಪಷ್ಟವಾಗಿ ಇಂಗ್ಲೀಷಿನಲ್ಲಿ ಬರೆಯಿರಿ. ಅಪೇಕ್ಷಿತ ವಸತಿ ಸೌಕರ್ಯ ಲಭ್ಯವಿಲ್ಲದಾಗ ಇತರೆ ವಸತಿಯನ್ನು ಕಾಯ್ದಿರಿಸಿ ಹೆಚ್ಚಿನ ಹಣವನ್ನು ನೀವು ಇಲ್ಲಿ ಬಂದಾಗ ಹಿಂದಿರುಗಿಸಲಾಗುವುದು. ಕಾಯ್ದಿರಿಸಿದ ಬಗ್ಗೆ ಪತ್ರವನ್ನು ಕಳುಹಿಸಲಾಗುತ್ತದೆ, ಅದನ್ನು ತೆಗೆದುಕೊಂಡೇ ತಿರುಪತಿ; ತಿರುಮಲೆಗಳಿಗೆ ಬನ್ನಿರಿ. ಅಂಚೆಯಲ್ಲಿನ ವಿಳಂಬಕ್ಕೆ ತಿ.ತಿ.ದೇ. ಹೊಣೆಯಲ್ಲ. ಮೀಸಲಾತಿಯ ಹಕ್ಕು ತಿ.ತಿ.ದೇ. ಗಳದ್ದು.

ತಿರುಮಲೆ ತಿರುಪತಿ ದೇವಸ್ಥಾನ.

ಶ್ರೀ ವೆಂಕಟೇಶ್ವರ ಪರಬ್ರಹ್ಮಣೇನಮಃ

## ನೀವು ಹಿಂದೂಗಳಾಗಿದ್ದೀರಿ-ಹೆಮ್ಮೆ ಹೊಂದಿರಿ.

## ಅತಿಶ್ರೇಷ್ಠ ಪರಂಪರೆ ನಿಮ್ಮದೆಂಬುದನ್ನು ನೆನೆಯಿರಿ.

## ದೃಢವಾದ ತಾತ್ವಿಕ ತಳಹದಿಯುನ್ನುಳ್ಳ ಹಿಂದೂಧರ್ಮವು ಧರ್ಮಗಳ ಧರ್ಮವಾಗಿದೆ.

## ನಿಜವಾದ ಹಿಂದೂಗಳಾಗಿರಿ-ಈ ಅಂಶಗಳನ್ನು ಗಮನಿಸಿ.

★ ನಿಮ್ಮ ಅಪೇಕ್ಷೆಯ ಸಂಕೇತವನ್ನು (ತಿಲಕ, ಗಂಧ, ವಿಭೂತಿ, ನಾಮ) ಹಣೆಯಲ್ಲಿ ಧರಿಸುವ ಆಚಾರವನ್ನು ಅಭ್ಯಸಿಸಿ.

★ ಸ್ನಾನದ ನಂತರ ದಿನಕ್ಕೊಮ್ಮೆಯಾದರೂ ನಾಮಜಪ ಮಾಡಿರಿ.

## ಹಲವು ನಾಮಜಪಗಳನ್ನು ಸೂಚಿಸಲಾಗಿದೆ ನಿಮಗಿಷ್ಟವಾದುದನ್ನು ಆಯ್ಕೆ ಮಾಡಿ ಕೊಳ್ಳಿರಿ.

ಓಂ ಶ್ರೀ ವೆಂಕಟೇಶಾಯ ನಮಃ
ಓಂ ನಮೋ ಭಗವತೇ ವಾಸುದೇವಾಯ
ಓಂ ನಮೋ ನಾರಾಯಣಾಯ
ಓಂ ನಮಃ ಶಿವಾಯ

ಹರೇ ರಾಮ ಹರೇ ರಾಮ
ರಾಮ ರಾಮ ಹರೇ ಹರೇ
ಹರೇ ಕೃಷ್ಣ ಹರೇ ಕೃಷ್ಣ
ಕೃಷ್ಣ ಕೃಷ್ಣ ಹರೇ ಹರೇ

★ ಪ್ರತಿ ದಿನವೂ ಶ್ರೀವೆಂಕಟೇಶ್ವರ ಸುಪ್ರಭಾತದ ಹತ್ತು ಶ್ಲೋಕಗಳನ್ನಾದರೂ ಹೇಳಿಕೊಳ್ಳಿರಿ

★ ವಾರಕ್ಕೊಮ್ಮೆ ನಿಮ್ಮ ಆಯ್ಕೆಯ ದೇವಾಲಯಕ್ಕೆ ಕುಟುಂಬದ ಎಲ್ಲ ಸದಸ್ಯರೊಂದಿಗೆ ಹೋಗಿ ದೇವರ ಪ್ರಾರ್ಥನೆ ಮಾಡಿರಿ.

★ ನಿಮ್ಮ ವಾಸಸ್ಥಳದಲ್ಲಿ 'ಓಂ'ಕಾರವನ್ನು ಹಚ್ಚಿರಿ.

★ ಭಗವದ್ಗೀತೆಯ ಒಂದು ಶ್ಲೋಕವನ್ನಾದರೂ ದಿನಕ್ಕೊಮ್ಮೆ ಪಠಿಸಿರಿ.

★ ಹಿಂದೂ ಧಾರ್ಮಿಕ ಸಾಮಾಜಿಕ ಹಬ್ಬಗಳಲ್ಲಿ ಭಾಗವಹಿಸಿರಿ.

---

## ಅವನಲ್ಲಿ ನಂಬಿಕೆಯಿಡಿ-ಅವನು ನಿಮ್ಮನ್ನು ಕಾಪಾಡುತ್ತಾನೆ.

---

ತಿರುಮಲೆ ತಿರುಪತಿ ದೇವಸ್ಥಾನಗಳು
ತಿರುಪತಿ.